RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೯<br>**Volume 149** | ಬೆಂಗಳೂರು, ಗುರುವಾರ, ಜನವರಿ ೧೬, ೨೦೧೪ (ಪುಷ್ಯ ೨೬, ಶಕ ವರ್ಷ ೧೯೩೫)<br>**Bangalore, Thursday, January 16, 2014 ( Pushya 26, Shaka Varsha 1935)** | ಸಂಚಿಕೆ ೩<br>**Issue 3** |
|---|---|---|


## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು, ಇವರ ನಡವಳಿಗಳು

ವಿಷಯ: **ಶ್ರೀ ಜಾನ್ ವಿನ್ಸೆಂಟ್ ದ್ವಿ.ದ.ಸ. ಎನ್.ಎಲ್.ಸಿ.ಸಿ.ಕೇಂದ್ರ, ಕನಕಪುರ ತಾಲ್ಲೂಕು ರಾಮನಗರ ಜಿಲ್ಲೆ ಇವರ ಅನಧಿಕೃತ ಗೈರುಹಾಜರಿ ಆರೋಪದ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಕುರಿತಂತೆ– ಅಂತಿಮ ಆದೇಶ.**

ಉಲ್ಲೇಖ:
1. ಉಪ ನಿರ್ದೇಶಕರು (ಕುಷ್ಠ), ಇವರ ಪತ್ರ ಸಂಖ್ಯೆ: ಎಲ್.ಪಿ.ಜಿ(ಸಿ)/90/2009–10, ದಿನಾಂಕ:06–08–2009.
2. ನಿರ್ದೇಶನಾಲಯದ ಸಮ ಸಂಖ್ಯೆ ಪತ್ರ ದಿನಾಂಕ:24–10–2009.
3. ಅರೆ ಸರ್ಕಾರಿ ಪತ್ರ ಸಂ/ಡಿಪಿಎನ್(1)ಸಿಆರ್–18/09–10 ದಿನಾಂಕ: 19–05–2012.
4. ಜಿಲ್ಲಾ ಆರೋಗ್ಯ ಮತ್ತು ಕು.ಕ ಅಧಿಕಾರಿಗಳು ರಾಮನಗರ ಜಿಲ್ಲೆ ಇವರ ಪತ್ರ ಸಂಖ್ಯೆ ಸಿಬ್ಬಂದಿ(3) ವಿಚಾರಣೆ 89/2009–10 ದಿನಾಂಕ: 21–09–2012.
5. ನಿರ್ದೇಶನಾಲಯದ ಸಮ ಸಂಖ್ಯೆ ಪತ್ರ ದಿನಾಂಕ: 05–11–2012.
6. ಜಿಲ್ಲಾ ಆರೋಗ್ಯ ಮತ್ತು ಕು.ಕ ಅಧಿಕಾರಿಗಳು ರಾಮನಗರ ಜಿಲ್ಲೆ ಇವರ ಪತ್ರ ಸಂಖ್ಯೆ ಸಿಬ್ಬಂದಿ(3) ವಿಚಾರಣೆ 89/2009–10 ದಿನಾಂಕ: 15–11–2012.
7. ವಿಚಾರಣಾಧಿಕಾರಿಗಳ ನೇಮಕ ದಿನಾಂಕ: 08–01–2013.
8. ಪತ್ರಿಕಾ ಪ್ರಕಟಣೆ ದಿನಾಂಕ: 28–02–2013.
9. ವಿಚಾರಣಾ ವರದಿ ದಿನಾಂಕ: 25–04–2013.
10. ಎರಡನೇ ಸೂಚನಾ ಪತ್ರ ದಿನಾಂಕ: 24–06–2013.

ಮೇಲೆ ಓದಲಾದ ಉಲ್ಲೇಖ(1)ರಲ್ಲಿ ದಿನಾಂಕ 28–7–2009 ರಂದು ಎಸ್.ಎಲ್.ಓ(ಕುಷ್ಠ)ರವರು ಎನ್.ಎಲ್.ಸಿ.ಸಿ.ಕೇಂದ್ರ ಕನಕಪುರ ಇಲ್ಲಿಗೆ ಭೇಟಿ ನೀಡಿದಾಗ ಶ್ರೀ ಜಾನ್ ವಿನ್ಸೆಂಟ್ ದ್ವಿ.ದ.ಸ. ಸುಮಾರು 3 ವರ್ಷದಿಂದ ಅನಧಿಕೃತ ಗೈರುಹಾಜರಿಯಾಗಿರುವುದನ್ನು ಗಮನಿಸಿ ಸೂಕ್ತ ಕ್ರಮ ತೆಗೆದುಕೊಳ್ಳಲು ಸೂಚಿಸಿರುತ್ತಾರೆ. ಮೇಲೆ ಓದಲಾದ ಉಲ್ಲೇಖ (2)ರಲ್ಲಿ ಇಲಾಖಾ ವಿಚಾರಣೆ ನಡೆಸಿ ವರದಿ ಸಲ್ಲಿಸಲು ಸೂಚಿಸಲಾಯಿತು. ಮೇಲೆ ಓದಲಾದ ಉಲ್ಲೇಖ (3)ರಲ್ಲಿ ಕೋರಿದ ಮಾಹಿತಿ ಒದಗಿಸುವಂತೆ ಅರೆ ಸರ್ಕಾರಿ ಪತ್ರ ಕಳುಹಿಸಲಾಯಿತು. ಮೇಲೆ ಓದಲಾದ (4)ರಲ್ಲಿ ದೋಷಾರೋಪಣಾ ಪಟ್ಟಿ ಜಾರಿ ಮಾಡಲಾಗಿದ್ದು ಪತ್ರ ಸ್ವೀಕೃತವಾಗದೆ ವಾಪಸ್ಸು ಬಂದಿರುತ್ತದೆ ಹಾಗೂ ನೌಕರರು ವಿದೇಶಕ್ಕೆ ಹೋಗಿರಬಹುದಾದ ಶಂಕೆ ಇದ್ದು ಮಾಹಿತಿ ಕೋರಿ ಪ್ರಾದೇಶಿಕ ಪಾಸ್ ಪೋರ್ಟ್ ಅಧಿಕಾರಿಗಳು ಭಾರತ ಸರ್ಕಾರ ಬೆಂಗಳೂರು ಇಲ್ಲಿಗೆ ಪತ್ರ ರವಾನಿಸಿದ್ದು ಇದುವರೆವಿಗೂ ಯಾವುದೇ ಮಾಹಿತಿ ಬಂದಿರುವುದಿಲ್ಲವೆಂದು ತಿಳಿಸಿರುತ್ತಾರೆ. ಸದರಿ ನೌಕರರು ರಕ್ಷಣಾ ಹೇಳಿಕೆ ಸಲ್ಲಿಸಿರುವುದಿಲ್ಲ. ಮೇಲೆ ಓದಲಾದ ಉಲ್ಲೇಖ (5)ರಲ್ಲಿ ನೌಕರರ ಸೇವಾವಿವರ, ದೋಷಾರೋಪಣಾ ಪಟ್ಟಿ ಹಾಗೂ ಖಾಯಂ ಪೂರ್ವ ಸೇವಾವಧಿ ಘೋಷಣೆಯಾದ ಬಗ್ಗೆ ಮಾಹಿತಿ ಒದಗಿಸುವಂತೆ ಸೂಚಿಸಲಾಗಿತ್ತು. ಮೇಲೆ ಓದಲಾದ ಉಲ್ಲೇಖ (6)ರಲ್ಲಿ ಕೋರಿದ ಮಾಹಿತಿಯನ್ನು ಒದಗಿಸಿರುತ್ತಾರೆ. ಸದರಿ ಪ್ರಕರಣದ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿಯಲು ಮೇಲೆ ಓದಲಾದ ಉಲ್ಲೇಖ (7)ರಲ್ಲಿ ವಿಚಾರಣಾಧಿಕಾರಿಗಳನ್ನು ನೇಮಕ ಮಾಡಲಾಗಿದ್ದು ಮೇಲೆ ಓದಲಾದ ಉಲ್ಲೇಖ (8)ರಲ್ಲಿ ಸದರಿ ನೌಕರರಿಗೆ ಪತ್ರಿಕಾ ಪ್ರಕಟಣೆ ಮೂಲಕ ಕರ್ತವ್ಯಕ್ಕೆ ಹಾಜರಾಗಲು ಸೂಚಿಸಲಾಗಿದ್ದು ಸದರಿ ನೌಕರರು ಯಾವುದೇ ರೀತಿಯಲ್ಲಿ ಸ್ಪಂದಿಸಿರುವುದಿಲ್ಲ ಹಾಗೂ ಇಲಾಖಾ ವಿಚಾರಣೆಗೆ ಹಾಜರಾಗಿರುವುದಿಲ್ಲ. ಉಲ್ಲೇಖ (9)ರಲ್ಲಿ ವಿಚಾರಣಾ ವರದಿಯಲ್ಲಿ ನೌಕರರ ಅನಧಿಕೃತ ಗೈರು ಹಾಜರಿ ಆರೋಪವು ಸಾಬೀತಾಗಿರುತ್ತದೆ ಎಂದು ವರದಿಯಲ್ಲಿ ಅಭಿಪ್ರಾಯ ಪಡಲಾಗಿದ್ದು ಮೇಲೆ ಓದಲಾದ (10)ರಲ್ಲಿ ನಿರ್ದೇಶನಾಲಯದಿಂದ ಎರಡನೇ ಸೂಚನಾ ಪತ್ರ ಜಾರಿ ಮಾಡಲಾಗಿದ್ದು ಪತ್ರ ಸ್ವೀಕೃತವಾಗದೆ ವಾಪಸ್ಸು ಬಂದಿರುತ್ತದೆ. ದೀರ್ಘ ಕಾಲದಿಂದ ಅನಧಿಕೃತ ಗೈರು ಹಾಜರಾಗಿರುವುದರಿಂದ ಕೆ.ಸಿ.ಎಸ್(ಸಿಸಿಎ) ನಿಯಮಾವಳಿಗಳು 1957ರ ನಿಯಮ 8(ii) ರಿಂದ 8(viii) ವರೆಗಿನ

ದಂಡನೆಯನ್ನು ವಿಧಿಸುವ ಸಕ್ಷಮ ಶಿಸ್ತು ಪ್ರಾಧಿಕಾರಿಯಾಗಿರುವುದರಿಂದ ವಿಚಾರಣಾ ಪ್ರಾಧಿಕಾರಿಗಳು ನೀಡಿರುವ ವರದಿಯಲ್ಲಿ ಆರೋಪವು ಸಾಬೀತಾಗಿರುವುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್(1)ಸಿಆರ್–18/2009–10 ದಿನಾಂಕ: –08–2013/7–10–2013**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಗಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ವಿ.ಬಿ.ಪಾಟೀಲ್, ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತಾಲಯ, ಬೆಂಗಳೂರು ಆದ ನಾನು **ಶ್ರೀ ಜಾನ್ ವಿನ್ಸೆಂಟ್ ದ್ವಿ.ದ.ಸ. ಎನ್.ಎಲ್.ಸಿ.ಸಿ.ಕೇಂದ್ರ, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ,** ಇವರ ದೀರ್ಘಕಾಲದ ಅನಧಿಕೃತ ಗೈರುಹಾಜರಿಗಾಗಿ ಆರೋಪವನ್ನು ಗಂಭೀರವಾಗಿ ಪರಿಗಣಿಸಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ರೀತ್ಯಾ ಹಾಗೂ ಸರ್ಕಾರಿ ಸೇವೆಗೆ ಪುನಃ ನೇಮಕಾತಿ ಹೊಂದಲು ಅನರ್ಹನಾಗುವ ರೀತಿ ನಿಯಮ 8(viii)ರ ಮೇರೆಗೆ ಸರ್ಕಾರಿ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿರುತ್ತೇನೆ.

**ಆಯುಕ್ತರು,**
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು,
ಬೆಂಗಳೂರು–9.

**P.R. 2368**
**S.C: 05**

## OFFICE OF THE CITY CIVIL COURT, BANGALORE

### NOTIFICATION

### No. ADM-I (E)2585/2013, Bangalore, Dated: 07th October 2013.

Sri T.Neelendra Naik, Asst. Registrar of City Civil Court, Bangalore is granted two days earned leave on 30-09-2013 & 1-10-2013, on personal ground.

Sri T.R.Harishappa, Asst.Registrar, City Civil Court, Bangalore is placed in additional charge of Sri T.Neelendra Naik, Asst. Registrar City Civil Court, Bangalore, during the above leave period.

Sri T.Neelendra Naik, Asst. Registrar, City Civil Court, Bangalore would have continued in the same post, but for proceedings on leave.

By Order of the Prl. City Civil & Sessions Judge, Bangalore,
**Registrar,**
City Civil Court, Bangalore,

**P.R. 2372**

## OFFICE OF THE CITY CIVIL COURT, BANGALORE

### NOTIFICATION

### No. ADM-I (E)2627/2013, Bangalore, Dated: 10th October 2013.

Sri Fareed Ahmed, Asst. Registrar, of City Civil Court, Bangalore is granted 8 days earned leave from 01-08-2013 to 08-08-2013, on personal ground.

Sri T.Neelendra Naik, Asst.Registrar, City Civil Court, Bangalore is placed in additional charge of Sri Fareed Ahmed, Asst. Registrar, City Civil Court, Bangalore, during the above leave period.

Sri Fareed Ahmed, Asst. Registrar, City Civil Court, Bangalore would have continued in the same post, but for proceedings on leave.

By Order of the Prl. City Civil & Sessions Judge, Bangalore,
**Registrar,**
City Civil Court, Bangalore,

**P.R. 2373**

## OFFICE OF THE CITY CIVIL COURT, BANGALORE

### NOTIFICATION

### No. ADM-I (E)2743/2013, Bangalore, Dated: 26th October 2013.

Sri Fareed Ahmed, Retd. Asst. Registrar, City Civil Court, Bangalore is granted cash equivalent of leave salary for earned leave not exceeding 300 days at his credit on the date of his retirement i.e., w.e.f. 30-09-2013 in accordance with Rule 118-A of K.C.S.Rs.

Further, it is certified that there are no departmental enquiries/ criminal proceedings are pending against Sri Fareed Ahmed, Retd. Asst. Registrar of this Court, who has retired from Service on attaining the age of superannuation on the afternoon of 30-09-2013.

He shall be paid pay and allowances admissible for the period of earned leave at his credit as per rules.

By Order of the Prl. City Civil & Sessions Judge,
**Registrar,**
City Civil Court, Bangalore,

**P.R. 2374**

## ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 2ನೇ ರಾಜಭವನ ರಸ್ತೆ, ಬೆಂಗಳೂರು

## ಅಧಿಸೂಚನೆ

**ಸಂಖ್ಯೆ: ಕೃಮಾಇ/ನಿಯವಿ/ಖಾಮಾಪ್ರಾಂ/42/11-12, ಬೆಂಗಳೂರು, ದಿನಾಂಕ: 30-10-2013**

ಮೆಟ್ರೋ ಕ್ಯಾಶ್ ಅಂಡ್ ಕ್ಯಾರಿ ಇಂಡಿಯಾ ಪ್ರೈವೇಟ್ ಲಿಮಿಟೆಡ್, ನಂ.26/3, ಇಂಡಸ್ಟ್ರಿಯಲ್ ಸರ್ಬರ್ಸ್ ಎ ಬ್ಲಾಕ್, ವಾರ್ಡ್-9, ಸುಬ್ರಹ್ಮಣ್ಯನಗರ, ಬೆಂಗಳೂರು-560055 ಇವರು ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ, ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ನಿಯಮಾವಳಿ 1968ರ ನಿಯಮ 87ಬಿ(1)(ii)ರ ಅನ್ವಯ ಖಾಸಗಿ ಮಾರುಕಟ್ಟೆ ಸ್ಥಾಪನೆಗೆ ಲೈಸೆನ್ಸ್ ಮಂಜೂರಾತಿಗಾಗಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ನಿಯಮ 87ಬಿ(7) ರಲ್ಲಿ ನಿಗಧಿಪಡಿಸಿರುವಂತೆ, ಸದರಿಯವರು ಉದ್ದೇಶಿಸಿರುವ ಖಾಸಗಿ ಮಾರುಕಟ್ಟೆಯಲ್ಲಿ ವ್ಯಾಪಾರ ವಹಿವಾಟಿಗೆ ಸೌಲಭ್ಯಗಳನ್ನು ಒದಗಿಸಿದ್ದು, ಇವುಗಳನ್ನು ದೃಢೀಕರಿಸಿಕೊಳ್ಳಲಾಗಿದೆ.

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 6(2)ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಕೃಷಿ ಮಾರಾಟ ನಿರ್ದೇಶಕನಾಗಿರುವ ಪಿ.ಎಸ್.ವಸ್ತ್ರದ ಆದ ನಾನು ಅಧಿಸೂಚಿತ ಕೃಷಿ ಉತ್ಪನ್ನಗಳ ಖರೀದಿ ಹಾಗೂ ಮಾರಾಟಕ್ಕಾಗಿ ಅನುಸೂಚಿಯಲ್ಲಿ ನಿಗಧಿಪಡಿಸಿದ ಈ ಕೆಳಕಂಡ ಸ್ಥಳವನ್ನು ಖಾಸಗಿ ಮಾರುಕಟ್ಟೆ ಪ್ರಾಂಗಣವೆಂದು ಘೋಷಿಸಿದ್ದೇನೆ.

**ಅನುಸೂಚಿ**

ಸರ್ವೆ ನಂ.33/1ಎ, ಬರ್ತನ ಅಗ್ರಹಾರ, ಬೇಗೂರ್ ಹೋಬಳಿ, ಹೊಸೂರು ಮುಖ್ಯ ರಸ್ತೆ, ಬೆಂಗಳೂರು ಇಲ್ಲಿ 3 ಎಕರೆ 15 ಗುಂಟೆ ಪ್ರದೇಶದ ಸೀಮಾಬದ್ಧ ಸ್ಥಳ

| | |
|---|---|
| ಪೂರ್ವಕ್ಕೆ | : ಸರ್ವೆ ನಂ.32,34 & 39 ಜಮೀನು. |
| ಪಶ್ಚಿಮಕ್ಕೆ | : ರಾಯಲ್ ಪಾಮ್ ಅಪಾರ್ಟ್‌ಮೆಂಟ್‌ಗೆ ಸೇರಿದ ಸರ್ವೆ ನಂ.33/1ಎ ರ ಉಳಿದ ಜಮೀನು. |
| ಉತ್ತರಕ್ಕೆ | : ಸರ್ವೆ ನಂ.33/2 & 33/3 ಜಮೀನು. |
| ದಕ್ಷಿಣಕ್ಕೆ | : ಎನ್.ಹೆಚ್-7 ರಸ್ತೆ. |

**ನಿರ್ದೇಶಕರು,**
ಕೃಷಿ ಮಾರಾಟ ಇಲಾಖೆ,
ಬೆಂಗಳೂರು

**P.R. 2377**
**S.C: 50**

## ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 11ನೇ ರಾಜಭವನ ರಸ್ತೆ, ಬೆಂಗಳೂರು

## ಅಧಿಸೂಚನೆ

**ಸಂಖ್ಯೆ: ಕೃಮಾಇ/246/ನಿಯವಿ/2009, ಬೆಂಗಳೂರು, ದಿನಾಂಕ: 28-09-2013**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 6(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿನ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾಗಿರುವ ಪಿ.ಎಸ್.ವಸ್ತ್ರದ ಆದ ನಾನು ಅಧಿಸೂಚನೆ ಸಂಖ್ಯೆ: ಕೃಮಾಇ/246/ನಿಯವಿ/2009, ದಿನಾಂಕ: 07-10-2009 ರಲ್ಲಿ ದಾಸನಪುರ ಉಪ ಮಾರುಕಟ್ಟೆಯಲ್ಲಿ ಆಲೂಗಡ್ಡೆ ಮತ್ತು ಈರುಳ್ಳಿ ಕೃಷಿ ಉತ್ಪನ್ನಗಳನ್ನು ಮಾರಾಟ ನಿಯಂತ್ರಣಕ್ಕಾಗಿ ಒಳಪಡಿಸಿರುವುದನ್ನು ರದ್ದುಪಡಿಸಿ ಈ ಕೆಳಕಂಡ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಒಳಪಡಿಸಿ ಘೋಷಿಸಿದ್ದು, ಉಳಿದಂತೆ ಸದರಿ ಅಧಿಸೂಚನೆಯಲ್ಲಿನ ಅಂಶಗಳು ಮುಂದುವರೆಯುತ್ತವೆ.

**ಕೃಷಿ ಉತ್ಪನ್ನಗಳು**

1.ಹತ್ತಿ (ಬೀಜ ತೆಗೆದ ಮತ್ತು ತೆಗೆಯದ), 2.ಎಲ್ಲಾ ಹೂ.ಗಳು, 3.ಸಜ್ಜೆ, 4.ಜವೆ ಗೋಧಿ, 5. ಜೋಳ, 6.ಕಂಬು, 7.ಮೆಕ್ಕೆಜೋಳ, 8.ನವಣೆ, 9.ಭತ್ತ, 10.ರಾಗಿ, 11.ಅಕ್ಕಿ, 12.ಸಾಮೆ (ಸಾವೆ), 13.ಗೋಧಿ, 14.ಅಂಟುವಾಳ, 15.ಬೊಂಬು, 16.ಬೆತ್ತ, 17.ಹಿಪ್ಪೇಬೀಜ, 18.ಹೊಂಗೇಬೀಜ, 19.ಬೇವಿನಬೀಜ, 20.ಸೀಗೇಕಾಯಿ, 21.ಹುಣಸೇಹಣ್ಣು, 22.ಹುಣಸೇಬೀಜ, 23.ಸೇಬು, 24.ಬಾಳೆಹಣ್ಣು, 25.ಬೋರೆಹಣ್ಣು 26.ಹುಳಿಹಣ್ಣುಗಳು, 27.ಚಕ್ಕೋತನ ಹಣ್ಣು, 28.ಪೇರಲೆಹಣ್ಣು (ಸೀಬೆಹಣ್ಣು), 29.ದ್ರಾಕ್ಷಿ, 30.ಹಲಸಿನಹಣ್ಣು, 31.ಜಂಬುನೇರಳೆಹಣ್ಣು, 32.ನಿಂಬೆಹಣ್ಣು, 33.ಕರಬೂಜ, 34.ಮಾವಿನಹಣ್ಣು, 35.ಮೂಸಂಬಿ, 36.ಮರಸೇಬು, 37.ಪೈನಾಪಲ್(ಅನಾನಸ್), 38.ಪಪ್ಪಾಯಿಹಣ್ಣು(ಪರಂಗಿಹಣ್ಣು), 39.ದಾಳಿಂಬೆಹಣ್ಣು, 40.ಸಪೋಟಾ, 41.ಸಿದ್ದೋಟ, 42.ಕಿತ್ತಳೆ, 43.ಕಲ್ಲಂಗಡಿ, 44.ನೆಲಗಡಲೆ(ಶೇಂಗಾ) (ಕಾಯಿ ಮತ್ತು ಬೀಜ), 45.ಹರಳುಬೀಜ, 46.ಹತ್ತಿಬೀಜ, 47.ಅಗಸೆಬೀಜ, 48.ಸಾಸುವೆ, 49.ಹುಚ್ಚೆಳ್ಳು, 50.ಕುಸುಬೆ, 51.ಎಳ್ಳು, 52.ಸೂರ್ಯಕಾಂತಿಬೀಜ, 53.ಸೋಯಾಬೀನ್, 54.ಅಡಿಕೆ, 55.ಗೋಡಂಬಿಬೀಜ, 56.ಒಣಮೆಣಸಿನಕಾಯಿ, 57.ತೆಂಗಿನಕಾಯಿ, 58.ಕೊಬ್ಬರಿ, 59.ಕೊತ್ತಂಬರಿಬೀಜ (ಧನಿಯಾ), 60.ಬೆಳ್ಳುಳ್ಳಿ, 61.ಶುಂಠಿ, 62.ಮೆಂತ್ಯ, 63.ಕಾಳುಮೆಣಸು, 64.ಅರಿಶಿನ, 65.ಅಲಸಂದೆ (ಇಡೀ ಮತ್ತು ಒಡೆದ), 66.ಅವರೆ (ಇಡೀ ಮತ್ತು ಒಡೆದ), 67.ಕಡಲೆ (ಇಡೀ ಮತ್ತು ಒಡೆದ), 68.ಉದ್ದು (ಇಡೀ ಮತ್ತು ಒಡೆದ), 69.ಬುಲ್ಲರ್ (ಇಡೀ ಮತ್ತು ಒಡೆದ), 70.ಹೆಸರು (ಇಡೀ ಮತ್ತು ಒಡೆದ), 71.ಹುರುಳಿ, 72.ಲಾಕ್ (ಇಡೀ ಮತ್ತು ಒಡೆದ), 73.ಮಡಿಕೆ (ಮಟಕಿ) (ಇಡೀ ಮತ್ತು ಒಡೆದ), 74.ಚೆನ್ನಂಗಿ (ಮಸೂರಿ) (ಇಡೀ ಮತ್ತು ಒಡೆದ), 75.ಬಟಾಣಿ, 76.ತೊಗರಿ (ಇಡೀ ಮತ್ತು ಒಡೆದ), 77.ಮೋಠ್ (ಇಡೀ ಮತ್ತು ಒಡೆದ), 78.ಎಲ್ಲಾ ತರಕಾರಿಗಳು (ಸೊಪ್ಪುಗಳು ಸೇರಿಸಿ) (ಗರ್ಕಿನ್ ಹೊರತುಪಡಿಸಿ), 79.ಕಾಯಿಗಳು, 80.ಹಸಿರುಮೆಣಸಿನಕಾಯಿ, 81.ಈರುಳ್ಳಿ, 82.ಆಲೂಗೆಡ್ಡೆ, 83.ಸುವರ್ಣಗೆಡ್ಡೆ, 84.ಸಿಹಿಗೆಣಸು (ಗೆಣಸು), 85.ಟೊಮ್ಯಾಟೋ, 86.ವೀಳ್ಯೆದೆಲೆ, 87.ಬೆಲ್ಲ, 88.ತೆಂಗಿನಕಡ್ಡಿ, 89.ಒಣದ್ರಾಕ್ಷಿ.

**ಪಿ.ಎಸ್.ವಸ್ತ್ರದ,**
**ನಿರ್ದೇಶಕರು,**
ಕೃಷಿ ಮಾರಾಟ ಇಲಾಖೆ, ಬೆಂಗಳೂರು

**P.R. 2378**
**S.C: 30**

**ಕಮಾಂಡೆಂಟ್‌ರವರ ಕಛೇರಿ, 4ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು–34**

**ಪ್ರಕಟಣೆ**

**ಸಂಖ್ಯೆ: ಸಿಬ್ಬಂದಿ(1)/ಡಿಇ–12/2011–12, ಬೆಂಗಳೂರು, ದಿನಾಂಕ: 03–08–2013**

**ಶ್ರೀ ಸಿ.ಜೆ.ಆರೋಗ್ಯಸ್ವಾಮಿ, ಅನುಯಾಯಿ–68, 4ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಇವರನ್ನು ಸೇವೆಯಿಂದ ವಜಾಗೊಳಿಸಿರುವ ಕುರಿತು.**

ಶ್ರೀ ಸಿ.ಜೆ.ಆರೋಗ್ಯಸ್ವಾಮಿ, ಅನುಯಾಯಿ–68, 'ಎಫ್' ದಳ, 4ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಇವರು ಕರ್ತವ್ಯಕ್ಕೆ ದಿನಾಂಕ: 31–08–2011ರಿಂದ ಅನಧಿಕೃತವಾಗಿ ಗೈರುಹಾಜರಾಗಿರುತ್ತಾರೆ. ಇವರಿಗೆ ಕರ್ತವ್ಯಕ್ಕೆ ಮತ್ತು ಇಲಾಖಾ ವಿಚಾರಣೆಗೆ ಹಾಜರಾಗುವಂತೆ ಸೂಚಿಸಿ ಜ್ಞಾಪನವನ್ನು ಅವರು ಕಛೇರಿಗೆ ನೀಡಿರುವ ವಿಳಾಸಕ್ಕೆ ಕಳುಹಿಸಿದಾಗ ಅಲ್ಲಿ ಅವರು ವಾಸವಿಲ್ಲದಿರುವುದು ತಿಳಿದುಬಂದಿರುತ್ತದೆ. ಆದಕಾರಣ ಇವರ ಮೇಲೆ ಕೆ.ಎಸ್.ಪಿ(ಡಿಪಿ) ನಿಯಮಗಳು 1965/89ರ ನಿಯಮ 6ರಡಿಯಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಲಾಗಿರುತ್ತದೆ. ಇವರ ಮೇಲೆ ಹೊರಿಸಿರುವ ದೋಷಾರೋಪಣೆಯು ಸಾಬೀತಾಗಿರುವುದರಿಂದ, ಕಾರಣ ಕೇಳುವ ಸೂಚನಾ ಪತ್ರವನ್ನು ಹೊರಡಿಸಿದ್ದು, ಅದನ್ನು ಆರೋಪಿತರಿಗೆ ಅವರು ನೀಡಿದ ವಿಳಾಸದಲ್ಲಿ ವಾಸಿಸದಿರುವ ಕಾರಣ ಹಾಗೂ ಅವರ ಇರುವಿಕೆಯು ತಿಳಿಯದೆ ಇದ್ದ ಕಾರಣ ಜಾರಿಮಾಡಲಾಗಿರುವುದಿಲ್ಲ. ಆದಕಾರಣ ದಿನಾಂಕ:25–05–2013ರ ಕನ್ನಡ ಪ್ರಭ ದಿನಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಿ, ಕಾರಣ ಕೇಳುವ ಸೂಚನಾ ಪತ್ರಕ್ಕೆ ವಿವರಣೆಯನ್ನು ಸಲ್ಲಿಸುವಂತೆ ಸೂಚಿಸಿದ್ದರೂ ಸಹ, ಆರೋಪಿತರು ಇದುವರೆಗೆ ಕರ್ತವ್ಯಕ್ಕೆ ಹಾಜರಾಗಲಿಲ್ಲ ಮತ್ತು ವಿವರಣೆಯನ್ನು ಸಲ್ಲಿಸಿರುವುದಿಲ್ಲ. ಆದ್ದರಿಂದ ನನಗೆ ಪ್ರದತ್ತವಾದ ಅಧಿಕಾರದ ಪ್ರಕಾರ ಶ್ರೀ ಸಿ.ಜೆ.ಆರೋಗ್ಯಸ್ವಾಮಿ, ಅನುಯಾಯಿ–68, 4ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಇವರನ್ನು ದಿನಾಂಕ: 31–08–2011 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿ, ಕರ್ತವ್ಯದಿಂದ ತೆಗೆದು ಹಾಕಲಾಗಿದೆ.

**ಎಫ್.ಬಿ.ರೇವಣ್ಣವರ್, ಕೆ.ಎಸ್.ಪಿ.ಎಸ್,**
ಕಮಾಂಡೆಂಟ್,
4ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು – 560 034

P.R. 2402
S.C: 05

**ಕಂದಾಯ ಸಚಿವಾಲಯ**

**ನಮೂನೆ–27**

**ಕರ್ನಾಟಕ ಭೂ ಕಂದಾಯ ಅಧಿನಿಯಮ ಕಲಂ 68(1) ಮತ್ತು ನಿಯಮ 94 ರನ್ವಯ ಘೋಷಣೆ**

**ಅಧಿಸೂಚನೆ**

**ಸಂಖ್ಯೆ: ಆರ್‌ಡಿ 27 ಎಲ್‌ಜಿವೈ 2013 ಬೆಂಗಳೂರು, ದಿನಾಂಕ : 20ನೇ ಸೆಪ್ಟೆಂಬರ್ 2013**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿದ ಸಾರ್ವಜನಿಕ ಸ್ವತ್ತಿನ ಭಾಗವು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದಿರುತ್ತದೆ.

ಪ್ರಯುಕ್ತ ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 68ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸಾರ್ವಜನಿಕ ಸ್ವತ್ತಿನ ಸದರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ ಸ್ವತ್ತಿನ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಉದ್ದೇಶಿಸಿ, ಈ ಮೂಲಕ ಘೋಷಿಸುತ್ತದೆ.

ಸಾರ್ವಜನಿಕ ಹಕ್ಕಿನ ಜೊತೆಗೆ ಸದರಿ ಸ್ವತ್ತಿನ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಅನ್ಯಥಾ ಬಾಧಿತನಾಗುವ/ಪ್ರತಿಕೂಲ ಪರಿಣಾಮಕ್ಕೆ ಒಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವುದೇ ಸಾರ್ವಜನಿಕರ ಅಥವಾ ಯಾವುದೇ ವ್ಯಕ್ತಿಯು ಈ ಪ್ರಕಟಣೆಯನ್ನು ಹೊರಡಿಸಿದ ತೊಂಬತ್ತು (90) ದಿನಗಳೊಳಗೆ ಸದರಿ ಉದ್ದೇಶದ ಬಗ್ಗೆ ತಮ್ಮ ಆಕ್ಷೇಪಣೆಗಳನ್ನು ಅಂತಹ ಹಿತಾಸಕ್ತಿಯು ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹಕ್ಕಿನ ನಷ್ಟ ಪರಿಹಾರಕ್ಕೆ ಕ್ಲೇಮು ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಸರ್ಕಾರಕ್ಕೆ ಲಿಖಿತ ರೂಪದಲ್ಲಿ ತಿಳಿಸತಕ್ಕದ್ದು ಮತ್ತು ಸದರಿ ಮುಕ್ತ ಆಕ್ಷೇಪಣೆಗಳನ್ನು ಮತ್ತು ಹಕ್ಕುಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಸರ್ಕಾರದ ಹಂತದಲ್ಲಿ ಪರಿಶೀಲಿಸತಕ್ಕದ್ದು.

**ಅನುಸೂಚಿ**

| ಜಿಲ್ಲೆ | ತಾಲ್ಲೂಕು | ಹೋಬಳಿ | ಗ್ರಾಮ | ಸ.ನಂ. | ವಿಸ್ತೀರ್ಣ | ತರಹೆ |
|---|---|---|---|---|---|---|
| ಮಂಡ್ಯ | ಮಳವಳ್ಳಿ | ಕಸಬಾ | ಕಲ್ಲುವೀರನಹಳ್ಳಿ | 67 | 0–23 ಗುಂಟೆ | ಗೊಬ್ಬರದ ಗುಂಡಿ |

**ಈ ಕೆಳಕಂಡ ಚಕ್ಕುಬಂದಿಯ ಮಧ್ಯೆ ಇರುವ ಪ್ರದೇಶ:**

| | |
|---|---|
| ಪೂರ್ವಕ್ಕೆ | ಗ್ರಾಮಠಾಣಾ |
| ಪಶ್ಚಿಮಕ್ಕೆ | ಹಳ್ಳ |
| ಉತ್ತರಕ್ಕೆ | ಹಳ್ಳ |
| ದಕ್ಷಿಣಕ್ಕೆ | ಸ.ನಂ. 68 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಶಿವಲಿಂಗಯ್ಯ,**
ಪೀಠಾಧಿಕಾರಿ,
ಕಂದಾಯ ಇಲಾಖೆ (ಭೂ.ಮಂ–2).

P.R. 2425
S.C: 50

## ಕಂದಾಯ ಸಚಿವಾಲಯ

### ನಮೂನೆ–29

### 68ನೇ ಪ್ರಕರಣದ (5)ನೇ ಉಪ–ಪ್ರಕರಣದ ಮೇರೆಗಿನ ಘೋಷಣೆ – ನಿಯಮ 96

### ಅಧಿಸೂಚನೆ

**ಸಂಖ್ಯೆ: ಆರ್‌ಡಿ 05 ಎಲ್‌ಜಿವೈ 2013 ಬೆಂಗಳೂರು, ದಿನಾಂಕ : 07ನೇ ನವೆಂಬರ್ 2013**

ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣದ 5ನೇ ಉಪ–ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸದರಿ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ ರವರು ತಮ್ಮ ನೋಟೀಸಿನ ಸಂಖ್ಯೆ : ಎಲ್.ಎನ್.ಡಿ.(1)256/2010–11, ದಿನಾಂಕ:12–06–2012ರಂತೆ ಈ ಕೆಳಕಂಡ ಸ್ವತ್ತಿನ ಭಾಗವು ಸಾರ್ವಜನಿಕರಿಗೆ ಅಗತ್ಯವಿಲ್ಲವೆಂದು, ಸದರಿ ಸ್ವತ್ತಿನ ಭಾಗದಲ್ಲಿ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳುತ್ತದೆಂದು ಪ್ರಕಟಣೆಯಲ್ಲಿ ಹೊರಡಿಸಿದ್ದು, 90 (ತೊಂಬತ್ತು) ದಿನಗಳು ಕಳೆದರೂ, ಸದರಿ ಸ್ವತ್ತಿನ ಹಕ್ಕಿನ ಸ್ವರೂಪದ, ಪ್ರತಿಕೂಲ ಪರಿಣಾಮದ ಮತ್ತು ನಷ್ಟದ ಪರಿಹಾರದ ಕ್ಲೇಮುಗಳ ಬಗ್ಗೆ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ. ಈ ಕುರಿತು ಜಿಲ್ಲಾಧಿಕಾರಿಗಳು, ಮಂಡ್ಯ ರವರ ವಿವರ ವರದಿಯನ್ನು ಪರಿಗಣಿಸಿ ರಾಜ್ಯ ಸರ್ಕಾರಕ್ಕೆ ಈ ಸ್ವತ್ತು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮನಗಂಡು, ಈ ಸ್ವತ್ತಿನ ಮೇಲಿನ ಎಲ್ಲಾ ಹಕ್ಕುಗಳು ಅಳಿದುಹೋಗತಕ್ಕದ್ದು ಎಂದು ಘೋಷಿಸಿದೆ. ಹಾಗೂ ಈ ಸ್ವತ್ತನ್ನು ರಾಜ್ಯ ಸರ್ಕಾರವು ವಿಲೇ ಮಾಡುವ ಅಧಿಕಾರಕ್ಕೆ ಒಳಪಡುತ್ತದೆ ಎಂದು ತಿಳಿಯಪಡಿಸಿದೆ.

**ಅನುಸೂಚಿ**

| | |
|---|---|
| **ರಸ್ತೆಯ ಭಾಗ ಇತ್ಯಾದಿ ಇರುವ ಗ್ರಾಮ** | ಧನಗೂರು |
| **ತಾಲ್ಲೂಕು** | ಮಳವಳ್ಳಿ |
| **ಜಿಲ್ಲೆ** | ಮಂಡ್ಯ |
| **ರಸ್ತೆ ಮೊದಲಾದುದರ ಭಾಗದ ವರ್ಣನೆ** | ಸ.ನಂ. 399 |
| **ರಸ್ತೆಯ ಭಾಗದ ಸರಿಸುಮಾರು ವಿಸ್ತೀರ್ಣ** | 5–00 ಎಕರೆ |
| **ಮೇರೆಗಳು** | |
| **ಪೂರ್ವಕ್ಕೆ** | ಅಲ್ಲಾಭಕ್ಷ ಬಿನ್ ಸೈಯದ್ ಅಹಮದ್ ರವರ ಹಿಡುವಳಿ ಜಮೀನು |
| **ಪಶ್ಚಿಮಕ್ಕೆ** | ಸದರಿ ಸರ್ವೆ ನಂಬರಿನ ಉಳಿಕೆ ಜಮೀನು |
| **ಉತ್ತರಕ್ಕೆ** | ಕೊಡುಗೆಗೌಡ ಬಿನ್ ರಂಗೇಗೌಡರ ಜಮೀನು |
| **ದಕ್ಷಿಣಕ್ಕೆ** | ಅಬ್ದುಲ್ ನಜೀರ್ ಬಿನ್ ಸೈಎಯದ್ ಅಬ್ದುಲ್ ರೆಹಮಾನ್‌ರವರ ಜಮೀನು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವಪ್ರಕಾಶ,**
ಪೀಠಾಧಿಕಾರಿ (ಪ್ರ),
ಕಂದಾಯ ಇಲಾಖೆ (ಭೂ.ಮಂ–2).

**P.R. 2426**
**S.C: 50**

## ಕಂದಾಯ ಸಚಿವಾಲಯ

### ನಮೂನೆ–27

### ಕರ್ನಾಟಕ ಭೂ ಕಂದಾಯ ಅಧಿನಿಯಮ ಕಲಂ 68(1) ಮತ್ತು ನಿಯಮ 94 ರನ್ವಯ ಘೋಷಣೆ

**ಸಂಖ್ಯೆ: ಆರ್‌ಡಿ 12 ಎಲ್‌ಜಿಎಂ 2012, ಬೆಂಗಳೂರು, ದಿನಾಂಕ : 24ನೇ ಆಗಸ್ಟ್, 2013**

ಗುಂಡ್ಲುಪೇಟೆ ತಾಲ್ಲೂಕು ಬೇಗೂರು ಹೋಬಳಿ ಹಸಗೂಲಿ ಗ್ರಾಮದ ಸ.ನಂ.5 ರಲ್ಲಿನ 2–20 ಎಕರೆ ಸರ್ಕಾರಿ ಕಟ್ಟೆ ಎಂಬುದಾಗಿ ನಮೂದಾಗಿರುವ ಜಮೀನನ್ನು ತಾಲ್ಲೂಕು ಆರೋಗ್ಯಾಧಿಕಾರಿಗಳ ಕೇಂದ್ರದ ಕಟ್ಟಡ ನಿರ್ಮಾಣಕ್ಕೆ 2–06 ಎಕರೆ ಮತ್ತು ಉಳಿಕೆ 0–14 ಗುಂಟೆ ಜಮೀನನ್ನು ಸಾರ್ವಜನಿಕರು ತಿರುಗಾಡುವ ರಸ್ತೆಗಾಗಿ ಉಪಯೋಗಿಸಿಕೊಳ್ಳಲು ತೀರ್ಮಾನಿಸಲಾಗಿದ್ದು, ಸದರಿ ಜಮೀನು ಆರ್.ಟಿ.ಸಿ.ಯಂತೆ ಸರ್ಕಾರಿ ಕಟ್ಟೆ ಎಂಬುದಾಗಿ ನಮೂದಾಗಿರುವುದರಿಂದ ಸದರಿ ಜಮೀನನ್ನು ವಿರಹಿತಗೊಳಿಸಿ ಮೇಲ್ಕಂಡ ಉದ್ದೇಶಕ್ಕೆ ಉಪಯೋಗಿಸಿಕೊಳ್ಳಲು ಸಾರ್ವಜನಿಕ ಪ್ರಕಟಣೆಯನ್ನು ಹೊರಡಿಸಿ ಕರ್ನಾಟಕ ಭೂ ಕಂದಾಯ ಅಧಿನಿಯಮ 1964(68) ನೇ ಪ್ರಕರಣದ 1ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಸರ್ಕಾರಿ ಕಟ್ಟೆ ಜಮೀನನ್ನು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಕಂಡು ಬಂದಿರುವುದರಿಂದ ಸಾರ್ವಜನಿಕ ಹಾಗೂ ಎಲ್ಲಾ ಬಾಧಿತ ವ್ಯಕ್ತಿಗಳ ಹಕ್ಕುಗಳನ್ನು ನಷ್ಟಗೊಳಿಸಲು ಯೋಜಿಸಲಾಗಿದೆ.

ಆದ್ದರಿಂದ ಮೇಲ್ಕಂಡ ಸರ್ವೆ ನಂಬರ್ 5ರಲ್ಲಿನ 2–20 ಎಕರೆ ಸರ್ಕಾರಿ ಕಟ್ಟೆ ಎಂದಿರುವುದನ್ನು ವಿರಹಿತಗೊಳಿಸುವ ವಿಚಾರದಲ್ಲಿ ಸಾರ್ವಜನಿಕರಿಂದ ಹಾಗೂ ಹಕ್ಕುಳ್ಳ ಎಲ್ಲಾ ಬಾಧಿತ ವ್ಯಕ್ತಿಗಳಿಂದ ಆಕ್ಷೇಪಣೆಗಳನ್ನು ಕರೆಯಲಾಗಿದೆ. ಈ ಸಂಬಂಧ ಪ್ರತಿಕೂಲವಾಗಿ ಬಾಧಿತ ವ್ಯಕ್ತಿಗಳಿಂದ ಆಕ್ಷೇಪಣೆಗಳನ್ನು ಕರೆಯಲಾಗಿದೆ. ಈ ಸಂಬಂಧ ಪ್ರತಿಕೂಲವಾಗಿ ಬಾಧಿತರಾಗಿರುವ ಸಾರ್ವಜನಿಕರಾಗಲಿ, ಸದಸ್ಯರು ಅಥವಾ ವ್ಯಕ್ತಿಗಳು ಈ ತಿಳುವಳಿಕೆ ದಿನಾಂಕದಿಂದ (90) ತೊಂಬತ್ತು ದಿನಗಳೊಳಗಾಗಿ ತನ್ನ ಹಿತ ಸಂಬಂಧ ಅಥವಾ ಅಥವಾ ಹಕ್ಕಿನ ಸ್ವರೂಪವನ್ನು ಅಥವಾ ಹಕ್ಕಿನ ಬಗ್ಗೆ ಪರಿಹಾರವೆಂದು ಕೇಳಬಹುದಾದ ಮೊಬಲಗನ್ನು ಹಾಗೂ ತಪಸೀಲುಗಳನ್ನು ಬರಹದ ಮೂಲಕ ತಹಶೀಲ್ದಾರ್, ಗುಂಡ್ಲುಪೇಟೆ ರವರಿಗೆ ಸಲ್ಲಿಸತಕ್ಕದ್ದು. ನಿಗಧಿತ ಅವಧಿಯೊಳಗೆ ಯಾವುದೇ ಆಕ್ಷೇಪಣೆಗಳನ್ನು ಬರಹದ ಮೂಲಕ ತಹಶೀಲ್ದಾರ್, ಗುಂಡ್ಲುಪೇಟೆ ರವರಿಗೆ ಸಲ್ಲಿಸದಿದ್ದಲ್ಲಿ ಮೇಲೆ ತಿಳಿಸಲಾಗಿರುವ ಮೇಲ್ಕಂಡ ಸರ್ವೆ ನಂಬರ್ 5 ರಲ್ಲಿನ 2–20 ಎಕರೆ ಸರ್ಕಾರಿ ಕಟ್ಟೆ ಎಂದಿರುವುದನ್ನು ವಿರಹಿತಗೊಳಿಸುವ ಬಗ್ಗೆ ಕ್ರಮ ಕೈಗೊಳ್ಳಲಾಗುವುದು ಎಂದು ತಿಳಿಯುವುದು.

| | |
|---|---|
| **ರಸ್ತೆಯ/ಬೀದಿಯ/ಗಲ್ಲಿಯ/ದಾರಿಯ ಭಾಗವು ಇರುವ ಗ್ರಾಮ** | ಹಸಗೂಲಿ |
| **ತಾಲ್ಲೂಕು** | ಗುಂಡ್ಲುಪೇಟೆ |
| **ಜಿಲ್ಲೆ** | ಚಾಮರಾಜನಗರ |
| **ರಸ್ತೆಯ/ಬೀದಿಯ/ಗಲ್ಲಿಯ/ದಾರಿಯ ಸರಿ ಸುಮಾರು ವರ್ಣನೆ** | ಗುಂಡ್ಲುಪೇಟೆ ತಾಲ್ಲೂಕು ಹಸಗೂಲಿ ಗ್ರಾಮದ ಸ.ನಂ |
| **ರಸ್ತೆಯ/ಬೀದಿಯ/ಗಲ್ಲಿಯ/ದಾರಿಯ ಸರಿ ಸುಮಾರು ವಿಸ್ತೀರ್ಣ** | 2–20 |
| **ಮೇರೆಗಳು** | ಪೂರ್ವಕ್ಕೆ : ಹಾಲಿ ಸ್ಥಿತಿಯಂತೆ ರಸ್ತೆ |
| | ಪಶ್ಚಿಮಕ್ಕೆ : ಸ.ನಂ 4 ರ ಜಮೀನು |
| | ಉತ್ತರಕ್ಕೆ : ಸರ್ವೆ ನಂಬರ್ 3,4 ಹಾಗೂ ರಸ್ತೆ |
| | ದಕ್ಷಿಣಕ್ಕೆ : ಸರ್ವೆ ನಂಬರ್ 73 ಹಾಗೂ ರಸ್ತೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಶಿವಲಿಂಗಯ್ಯ,**

ಪೀಠಾಧಿಕಾರಿ,

ಕಂದಾಯ ಇಲಾಖೆ (ಭೂ.ಮಂಜೂರಾತಿ–2).

**P.R. 2427**
**S.C: 50**

## ಕಂದಾಯ ಸಚಿವಾಲಯ

**ನಮೂನೆ–27**

**ಕರ್ನಾಟಕ ಭೂ ಕಂದಾಯ ಅಧಿನಿಯಮ ಕಲಂ 68(1) ಮತ್ತು ನಿಯಮ 94 ರನ್ವಯ ಘೋಷಣೆ**

**ಅಧಿಸೂಚನೆ**

**ಸಂಖ್ಯೆ: ಆರ್‌ಡಿ 29 ಎಲ್‌ಜಿವೈ 2013 ಬೆಂಗಳೂರು, ದಿನಾಂಕ : 20ನೇ ಸೆಪ್ಟೆಂಬರ್ 2013**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿದ ಸಾರ್ವಜನಿಕ ಸ್ವತ್ತಿನ ಭಾಗವು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದಿರುತ್ತದೆ.

ಪ್ರಯುಕ್ತ ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 68ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸಾರ್ವಜನಿಕ ಸ್ವತ್ತಿನ ಸದರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ ಸ್ವತ್ತಿನ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಉದ್ದೇಶಿಸಿ ಈ ಮೂಲಕ ಘೋಷಿಸುತ್ತದೆ.

ಸಾರ್ವಜನಿಕ ಹಕ್ಕಿನ ಜೊತೆಗೆ ಸದರಿ ಸ್ವತ್ತಿನ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಅನ್ಯಥಾ ಬಾಧಿತನಾಗುವ/ಪ್ರತಿಕೂಲ ಪರಿಣಾಮಕ್ಕೆ ಒಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವುದೇ ಸಾರ್ವಜನಿಕರ ಅಥವಾ ಯಾವುದೇ ವ್ಯಕ್ತಿಯು ಈ ಪ್ರಕಟಣೆಯನ್ನು ಹೊರಡಿಸಿದ ತೊಂಬತ್ತು (90) ದಿನಗಳೊಳಗೆ ಸದರಿ ಉದ್ದೇಶದ ಬಗ್ಗೆ ತಮ್ಮ ಆಕ್ಷೇಪಣೆಗಳನ್ನು ಅಂತಹ ಹಿತಾಸಕ್ತಿಯು ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹಕ್ಕಿನ ನಷ್ಟ ಪರಿಹಾರಕ್ಕೆ ಕ್ಲೇಮು ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಸರ್ಕಾರಕ್ಕೆ ಲಿಖಿತ ರೂಪದಲ್ಲಿ ತಿಳಿಸತಕ್ಕದ್ದು ಮತ್ತು ಸದರಿ ಮುಕ್ತ ಆಕ್ಷೇಪಣೆಗಳನ್ನು ಮತ್ತು ಹಕ್ಕುಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಸರ್ಕಾರದ ಹಂತದಲ್ಲಿ ಪರಿಶೀಲಿಸತಕ್ಕದ್ದು.

**ಅನುಸೂಚಿ**

| | |
|---|---|
| **ರಸ್ತೆಯ ಭಾಗ ಇತ್ಯಾದಿ ಇರುವ ಗ್ರಾಮ** | ಕ್ಯಾತನಹಳ್ಳಿ |
| **ತಾಲ್ಲೂಕು** | ಪಾಂಡವಪುರ |
| **ಜಿಲ್ಲೆ** | ಮಂಡ್ಯ |
| **ರಸ್ತೆ ಮೊದಲಾದುದರ ಭಾಗ ಅಥವಾ ಭಾಗದ ವರ್ಣನೆ** | ಸ.ನಂ. 24 /ಪಿ2ರಲ್ಲಿನ 4–00 ಎಕರೆ ರಸ್ತೆಯ ಭಾಗ ಅಥವಾ ಭಾಗಗಳ ಸರಿಸುಮಾರು ವಿಸ್ತೀರ್ಣ ಮತ್ತು ಮೇರೆ ಒಟ್ಟು 4–00 ಎಕರೆ |
| **ಸಾರ್ವಜನಿಕ ರಸ್ತೆ/ಬೀದಿ/ಗಲ್ಲಿ/ದಾರಿ: ಅಥವಾ ಅದರ ಭಾಗ :–** | |
| **ಪೂರ್ವಕ್ಕೆ** | ಅಚ್ಚಪ್ಪನ ಕೊಪ್ಪಲು ಗ್ರಾಮ ಗಡಿ |
| **ಪಶ್ಚಿಮಕ್ಕೆ** | ಸರ್ಕಾರಿ ಖರಾಬು |
| **ಉತ್ತರಕ್ಕೆ** | ರಸ್ತೆ |
| **ದಕ್ಷಿಣಕ್ಕೆ** | ಸರ್ಕಾರಿ ಖರಾಬು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಶಿವಲಿಂಗಯ್ಯ,**

ಪೀಠಾಧಿಕಾರಿ,

ಕಂದಾಯ ಇಲಾಖೆ (ಭೂ.ಮಂ–2).

**P.R. 2428**
**S.C: 50**

## ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರ ಕಛೇರಿಯ ನಡವಳಿಗಳು

## ಸಂಖ್ಯೆ: ಡಿಟಿಇ 13 ಡಿಇಕ್ಯೂ(2) 2010, ದಿ: 15–06–2013

**ವಿಷಯ:** ಶ್ರೀ ಎನ್.ಗೌರೀಶ್, ಮೆಕ್ಯಾನಿಕ್ ಕಂಪ್ಯೂಟರ್ ಸೈನ್ಸ್ ವಿಭಾಗ, ಸರ್ಕಾರಿ ಪಾಲಿಟೆಕ್ನಿಕ್, ಚಿಂತಾಮಣಿ, ಇವರ ಅನಧಿಕೃತ ಗೈರು ಹಾಜರಿ ಕುರಿತು ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**

1. ನಿರ್ದೇಶಕರ ಆದೇಶ ಸಂ: ಡಿಟಿಇ 13 ಡಿಇಕ್ಯೂ(2)2010, ದಿ: 28.4.2012
2. ವಿಚಾರಣಾಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿ ದಿನಾಂಕ: 26–07–2012
3. 2ನೇ ಕಾರಣ ಕೇಳುವ ನೋಟೀಸ ಸಂಖ್ಯೆ: ಡಿಟಿಇ 13ಡಿಇಕ್ಯೂ(2)10, ದಿ:11.9.2012
4. 2ನೇ ಕಾರಣ ಕೇಳುವ ನೋಟೀಸ ಸ್ವೀಕರಿಸಿರುವುದಕ್ಕೆ ಪ್ರಿನ್ಸಿಪಾಲರ ಪತ್ರದಿ:30.12.2012
5. ಶ್ರೀ ಎನ್.ಗೌರೀಶ್, ಮೆಕ್ಯಾನಿಕ್, ಇವರು ಸಮಜಾಯಿಷಿ ಪತ್ರ ಸಲ್ಲಿಸಿರುವುದಿಲ್ಲ
6. 2ನೇ ಕಾರಣ ಕೇಳುವ ನೆನಪೋಲೆ ದಿ: 05.02.2013
7. ಪ್ರಿನ್ಸಿಪಾಲರು, ಸ.ಪಾ ಚಿಂತಾಮಣಿ ಇವರು ಶ್ರೀ ಎನ್.ಗೌರೀಶ್ ಇವರಿಗೆ ಜಾರಿ ಮಾಡಲಾದ ಜ್ಞಾಪನ ದಿನಾಂಕ: 04.10.2010, 01.01.2010, 21.11.2009, 19.12.2005, 16.11.2005, 26.10.2005, 23.6.2005, 05.12.2003, 24.5.2003, 06.08.2001, 31.5.2001, 16.5.2001, 08.12.2000, 7.1.2000.
8. ಪ್ರಿನ್ಸಿಪಾಲರು, ಸರ್ಕಾರಿ ಎಸ್.ಜೆ. ಪಾಲಿಟೆಕ್ನಿಕ್, ಬೆಂಗಳೂರು ಇವರು ಚಿಂತಾಮಣಿ ಇವರಿಗೆ ಬರೆದ ಪತ್ರ ದಿ: 14.9.2009
9. ಪ್ರಿನ್ಸಿಪಾಲರು ನಿರ್ದೇಶಕರಿಗೆ ಬರೆದ ಪತ್ರ ದಿ: 22.09.2009, 31.8.2010, 29.12.2010 ಅ.ಸ ಪ ದಿ: 05.9.2006
10. ನಿರ್ದೇಶನಾಲಯದಿಂದ ಜಾರಿ ಮಾಡಲಾದ ಅನಧಿಕೃತ ಗೈರು ಹಾಜರಿ ನೋಟಿಸು 24.01.2011
11. ದೋಷಾರೋಪಣಾ ಪಟ್ಟಿ ಜಾರಿ ಮಾಡಲಾದ ದಿ: 31.3.2012
12. ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957 ನಿಯಮ 8ರ ರೀತ್ಯಾ
13. ಕರ್ನಾಟಕ ನಾಗರೀಕ ಸೇವಾ ನಡತೆ (ವರ್ತನೆ) ನಿಯಮಗಳು 1966ರ ಸಾಮಾನ್ಯ ನಿಯಮ 1) (i), (ii), (iii)

**ಪ್ರಸ್ತಾವನೆ;**

ಸರ್ಕಾರಿ ಪಾಲಿಟೆಕ್ನಿಕ್, ಚಿಂತಾಮಣಿ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಎನ್.ಗೌರೀಶ್, ಮೆಕ್ಯಾನಿಕ್, ಇವರು ದಿ: 01.12.2006 ರಿಂದ ಈವರೆಗೂ ಸುಮಾರು 06 ವರ್ಷಗಳಿಗೂ ಹೆಚ್ಚು ಕಾಲ ಅನಧಿಕೃತ ಗೈರು ಹಾಜರಾದ ಬಗ್ಗೆ ಸಂಸ್ಥೆಯ ಪ್ರಿನ್ಸಿಪಾಲರು ಬರೆದ ಪತ್ರದ ಅನುಸಾರ ಸದರಿಯವರಿಗೆ ಇಲಾಖಾ ವತಿಯಿಂದ ಕಾರಣ ಕೇಳುವ ನೋಟೀಸು ಜಾರಿ ಮಾಡಲಾಗಿ, ಕಾರಣ ಕೇಳುವ ನೋಟೀಸಿಗೆ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ. ಆದ್ದರಿಂದ ಶಿಸ್ತು ಪ್ರಾಧಿಕಾರವು ಸದರಿಯವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಡತೆ (ವರ್ತನೆ) ನಿಯಮಗಳು 1966ರ ಸಾಮಾನ್ಯ ನಿಯಮ 1) (i), (ii), (iii) ನ್ನು ಉಲ್ಲಂಘಿಸಿದ ಕಾರಣಕ್ಕಾಗಿ ಮೇಲೆ 1) ರಲ್ಲಿ ಓದಲಾದ ನಿರ್ದೇಶಕರ ಆದೇಶದಲ್ಲಿ ಅನಧಿಕೃತ ಗೈರು ಹಾಜರಿಯ ಅವಧಿಗೆ ಪೂರ್ಣಾವಧಿ ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಿ ನ್ಯಾಯಮೂರ್ತಿ, ಶ್ರೀ ಎಂ.ಜಿ. ಹಿರೇಮಠ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸಲಾಯಿತು. ಅದರಂತೆ ವಿಚಾರಣಾಧಿಕಾರಿಗಳು ಸದರಿಯವರ ವಿರುದ್ಧದ ಆರೋಪಗಳ ಬಗ್ಗೆ ವಿಚಾರಣೆ ನಡೆಸಿ ಮೇಲೆ 2.ರಲ್ಲಿ ಓದಲಾದ ದಿ: 26–07–2012 ರಲ್ಲಿ ವಿಚಾರಣಾ ವರದಿ ಸಲ್ಲಿಸಿರುತ್ತಾರೆ. ಸದರಿಯವರ ವಿರುದ್ಧ ಕೆಳಕಂಡಂತೆ ಆರೋಪ ಹೊರಿಸಲಾಗಿತ್ತು. "ಸರ್ಕಾರಿ ಪಾಲಿಟೆಕ್ನಿಕ್, ಚಿಂತಾಮಣಿ ಇಲ್ಲಿ ಯಾಂತ್ರಿಕರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಎನ್.ಗೌರೀಶ್, ಆದ ನೀವು ಯಾವುದೇ ರಜೆ ಅರ್ಜಿ ಸಲ್ಲಿಸದೇ ಅಥವಾ ಮೇಲಧಿಕಾರಿಗಳ ಪೂರ್ವಾನುಮತಿ ಪಡೆಯದೆ ದಿನಾಂಕ: 01–12–2006 ರಿಂದ ಈವರೆಗೂ ಸುಮಾರು 06ವರ್ಷ ಗಳಿಗೂ ಹೆಚ್ಚು ಕಾಲ ದೀರ್ಘಾವಧಿ ಅನಧಿಕೃತ ಗೈರುಹಾಜರಾಗಿರುತ್ತೀರಿ. ಇದರಿಂದ ನೀವು ಕಛೇರಿಯ ದೈನಂದಿನ ಕೆಲಸ ಕಾರ್ಯಗಳಿಗೆ ತೊಂದರೆಯನ್ನುಂಟುಮಾಡಿ ಒಬ್ಬ ಜವಾಬ್ದಾರಿಯುತ ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ವರ್ತಿಸುವುದರೊಂದಿಗೆ ಕರ್ತವ್ಯದಲ್ಲಿ ಸತ್ಯ, ನಿಷ್ಠೆ ಹಾಗೂ ಪ್ರಾಮಾಣಿಕತೆಯನ್ನು ತೋರಿಸಲು ವಿಫಲರಾಗಿ ಕರ್ನಾಟಕ ನಾಗರೀಕ ಸೇವಾ ನಡತೆ (ವರ್ತನೆ) ನಿಯಮಗಳು 1966 ರ ನಿಯಮ 3(1) ರ ಉಪನಿಯಮ (i) (ii) ಮತ್ತು (iii) ನ್ನು ಉಲ್ಲಂಘಿಸಿರುವ ಆರೋಪಕ್ಕೆ ಒಳಗಾಗಿರುತ್ತೀರಿ. ಈ ನಿಮ್ಮ ವರ್ತನೆಯಿಂದ ನಿಮಗೆ ಸರ್ಕಾರಿ ಸೇವೆಯಲ್ಲಿ ಆಸಕ್ತಿ ಇಲ್ಲವೆಂದು ಆರೋಪಿಸಲಾಗಿದೆ.

ಆರೋಪಿತರ ವಿರುದ್ಧ ಆರೋಪಗಳ ಕುರಿತು ಸಾಕ್ಷ್ಯ ಮತ್ತು ಪ್ರಮುಖ ಅಂಶಗಳನ್ನು ಗಣನೆಗೆ ತೆಗೆದುಕೊಂಡು ವರದಿಯಲ್ಲಿ ವಿಶ್ಲೇಷಿಸಿರುವ ಸಾರಾಂಶ ಈ ಮುಂದಿನಂತಿದೆ.

ಆಪಾದಿತರು ಅವರ ವಿರುದ್ಧ ಮಾಡಿದ ಆರೋಪವನ್ನು ಒಪ್ಪಿಕೊಂಡಿದ್ದರಿಂದ ಮಂಡನಾಧಿಕಾರಿಗಳು ಆರೋಪವನ್ನು ಸಾಬೀತು ಪಡಿಸಲು ಯಾವುದೇ ಸಾಕ್ಷಿದಾರರನ್ನು ವಿಚಾರಿಸಿರುವುದಿಲ್ಲ. ಮತ್ತು ದಾಖಲೆಗಳನ್ನು ಹಾಜರು ಪಡಿಸಿರುವುದಿಲ್ಲ. ಮಂಡನಾಧಿಕಾರಿಗಳು ಮೌಖಿಕ ವಾದ ಮಂಡಿಸಿ ಆರೋಪ ಸಾಬೀತಾಗಿದೆಯೆಂದು ವರದಿ ಸಲ್ಲಿಸಲು ಕೋರಿರುತ್ತಾರೆ. ಆಪಾದಿತರು ಸಹ ಮೌಖಿಕ ಪ್ರತಿವಾದ ಮಂಡಿಸಿದರು.

ಆಪಾದಿತರ ವಿರುದ್ಧ ಮಾಡಿದ ಆರೋಪವನ್ನು ಗಮನಿಸಲಾಗಿ ಆಪಾದಿತರು 06 ವರ್ಷಗಳಿಗೂ ಹೆಚ್ಚು ದೀರ್ಘಾವಧಿ ಅನಧಿಕೃತ ಗೈರು ಹಾಜರಾಗಿದ್ದು ಕಛೇರಿಯ ದೈನಂದಿನ ಕೆಲಸ ಕಾರ್ಯಗಳಿಗೆ ತೊಂದರೆಯನ್ನುಂಟುಮಾಡಿದ್ದರಿಂದ ಆಪಾದಿತರು ಗಂಭೀರ ಸ್ವರೂಪದ ಆರೋಪವನ್ನು ಎಸಗಿದ್ದು ಕಂಡುಬರುತ್ತದೆ. ಆಪಾದಿತರು ಅವರ ಗೈರು ಹಾಜರಿ ಬಗ್ಗೆ ಯಾವುದೇ ವೈದ್ಯಕೀಯ ಪ್ರಮಾಣ ಪತ್ರಗಳನ್ನಾಗಲೀ ಹಾಗೂ ಬೇರೆ ಇನ್ನೇನಾದರೂ ಮಹತ್ವದ ದಾಖಲೆಗಳನ್ನಾಗಲೀ ಹಾಜರುಪಡಿಸಿಲ್ಲವಾದ್ದರಿಂದ ಅವರು ಉದ್ದೇಶ ಪೂರ್ವಕವಾಗಿ ಪೂರ್ವಾನುಮತಿ ಪಡೆಯದೆ ಹೆಚ್ಚು ಕಾಲ ಗೈರು ಹಾಜರಾಗಿದ್ದರಿಂದ ಕಠಿಣ ಶಿಕ್ಷೆಗೆ ಅರ್ಹರಾಗಿರುತ್ತಾರೆಂದು ವಿಚಾರಣಾಧಿಕಾರಿಗಳು ವರದಿ ಸಲ್ಲಿಸಿರುತ್ತಾರೆ.

ಆಪಾದಿತರು ಅವರ ವಿರುದ್ಧ ಮಾಡಿದ ಆರೋಪವನ್ನು ತಮ್ಮ ಪ್ರಾರಂಭಿಕ ಹೇಳಿಕೆಯಲ್ಲಿ ಒಪ್ಪಿಕೊಂಡಿರುವುದರಿಂದ ಅವರ ವಿರುದ್ಧ ಮಾಡಿದ ಆರೋಪವು ಸಾಬೀತಾಗಿರುತ್ತದೆ ಎಂದು ನಿರ್ಧರಿಸಿ ಈ ಮುಖ್ಯಾಂಶವನ್ನು ಸಕಾರಾತ್ಮಕವಾಗಿ ನಿರ್ಣಯಿಸಿ ಈ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತೇನೆ ಎಂದು ವರದಿಯಲ್ಲಿ ಉಲ್ಲೇಖಿಸಿರುತ್ತಾರೆ.

ಈ ಪ್ರಕರಣದಲ್ಲಿ ಆರೋಪಿತರಿಂದ ದುರ್ನಡತೆ ಎಸಗಲ್ಪಟ್ಟಿರುವುದನ್ನು ಯಾವುದೇ ಸಂದೇಹಕ್ಕೆ ಆಸ್ಪದ ಇಲ್ಲದಂತೆ ಖಚಿತಪಡಿಸಿದೆ. ಈ ಅಂಶಗಳನ್ನು ಸಮರ್ಥವಾಗಿ ಅಲ್ಲಗಳೆಯುವಂತಹ ಯಾವುದೇ ಮೌಖಿಕ ಅಂಶಗಳನ್ನು ಸಹ ಆರೋಪಿತರು ನಿರೂಪಿಸಿರುವುದಿಲ್ಲ. ವಿಚಾರಣೆಯು ಸಮರ್ಪಕವಾಗಿ ನಡೆದು ಆರೋಪಿತರಿಗೆ ತಮ್ಮ ವಾದವನ್ನು ಮಂಡಿಸಲು ವಿಫುಲ ಅವಕಾಶವನ್ನು ನೀಡಲಾಗಿದೆ. ಈ ಕಛೇರಿಯ ಎರಡನೇ ಕಾರಣ ಕೇಳುವ ನೋಟಿಸ್ ಸಂ: ಡಿಟಿಇ 13 ಡಿಇಕ್ಯೂ(2)10, ದಿ:11.9.2012 ರಲ್ಲಿ ವಿಚಾರಣಾಧಿಕಾರಿಗಳು ಸಲ್ಲಿಸಿರುವ ವರದಿಯನ್ನು ಲಗತ್ತಿಸಿ, ಸದರಿಯವರ ವಿರುದ್ಧ ಹೊರಿಸಲಾದ ಆರೋಪವು ಸಾಬೀತಾಗಿದೆಯೆಂದು ಸಲ್ಲಿಸಿರುವ ವರದಿಯನ್ನು ಅಂಗೀಕರಿಸಿ ಏಕೆ ಸೂಕ್ತ ದಂಡನೆ ವಿಧಿಸಬಾರದು ಎಂಬುದರ ಬಗ್ಗೆ ನೋಟಿಸ್ ತಲುಪಿದ 30 ದಿವಸಗಳೊಳಗಾಗಿ ಲಿಖಿತ ಸಮಜಾಯಿಷಿ ಸಲ್ಲಿಸಲು ತಿಳಿಸಲಾಗಿತ್ತು.

ಆದರೆ ಸದರಿ 2ನೇ ಕಾರಣ ಕೇಳುವ ನೋಟಿಸನ್ನು ಸ್ವೀಕರಿಸಿ ಪ್ರತ್ಯುತ್ತರವಾಗಿ ಯಾವುದೇ ಲಿಖಿತ ಸಮಜಾಯಿಷಿಯನ್ನು ಸಲ್ಲಿಸದೇ ಇದ್ದುದರಿಂದ 3 ನೆನಪೋಲೆಗಳನ್ನು ಜಾರಿ ಮಾಡಿದ್ದರೂ ಸಹ ಯಾವುದೇ ಉತ್ತರ ಸಲ್ಲಿಸಿರುವುದಿಲ್ಲ. ಆದ್ದರಿಂದ ಆರೋಪಿತರ ವಿರುದ್ಧದ ವಿಚಾರಣಾ ವರದಿಯನ್ನು ಅಂಗೀಕರಿಸಿ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಿಕೊಂಡ ಶಿಸ್ತು ಪ್ರಾಧಿಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ನಿರ್ದೇಶಕರ ಆದೇಶ ಸಂಖ್ಯೆ: ಡಿಟಿಇ 13 ಡಿಇಕ್ಯೂ(2)10, ಬೆಂಗಳೂರು ದಿನಾಂಕ: 04 ನೇ ಜುಲೈ 2013**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಾವಳಿ 1957ರ ನಿಯಮ 11 ಮತ್ತು 11 ಎ ರೊಡನೆ ಓದಿಕೊಂಡಂತೆ ಅದೇ ನಿಯಮಾವಳಿಯ ನಿಯಮ 8(vi) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರಿ ಪಾಲಿಟೆಕ್ನಿಕ್, ಚಿಂತಾಮಣಿ ಇಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಎನ್.ಗೌರೀಶ್, ಯಾಂತ್ರಿಕರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ **ಸರ್ಕಾರಿ ಸೇವೆಯಿಂದ ಈ ಮೂಲಕ ಕಡ್ಡಾಯ ನಿವೃತ್ತಿಗೊಳಿಸಿದೆ.**

ಸದರಿಯವರ ಗೈರು ಹಾಜರಾದ ಅವಧಿಯನ್ನು ಕೆಲಸ ಮಾಡದ ದಿನಗಳೆಂದು (Dies non) ಎಂದು ಪರಿಗಣಿಸಿ ಆದೇಶಿಸಲಾಗಿದೆ.

ನಿರ್ದೇಶಕರು

**PR.2431** ಹಾಗೂ ನೇಮಕಾತಿ ಮತ್ತು ಶಿಸ್ತು ಪ್ರಾಧಿಕಾರ

**SC.10** ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು

## In The Court of 2nd Additional Chief Metropolitan Magistrate Bangalore City

It is hereby notified to the public that the Thilaknagara police station, Bangalore City have seized the following vehicles as unclaimed and such vehicles are lying in the police station as unclaimed so far. Hence, the owners of the properties (vehicles) may put their claim within one month from the date of publication.

Bangalore city

Date: 06-12-2013

**2nd Additional Chief Metropolitan**

**Magistrate Bangalore City**

**List of the seized vehicles are lying in the Thilaknagara police station, Bangalore city which have been seized under Cr. No.'s & C-miss.**

| S L | C-MISS NO | P F NO | ITEM | TYPE OF VEHICLE | REG NO | CHA. NO | ENG. NO |
|---|---|---|---|---|---|---|---|
| 01 | C-MISS 372/5 | 105/05 | 01 | BAJAJ CHETAK | CKR-5772 | - | - |
| 02 | C-MISS 372/5 | 105/05 | 02 | BAJAJ PREM | CKR-5371 | - | - |
| 03 | C-MISS 377/5 | 107/05 | 01 | BAJAJ CHETAK | CTT-110 | - | - |
| 04 | C-MISS 392/5 | 110/05 | 01 | TVS SONA | KA-05-JA-224 | - | - |
| 05 | C-MISS 392/5 | 110/05 | 02 | BAJAJ CHETAK | CKR-6337 | | |
| 06 | C-MISS 394/5 | 111/05 | 01 | KENITEC HONDA | KA-03-J-6123 | - | - |
| 07 | C-MISS 394/5 | 111/05 | 02 | LONA | CKD-7562 | - | - |
| 08 | C-MISS 390/5 | 112/05 | 01 | HERO PUCK | KA-01-E-737 | - | - |
| 09 | C-MISS 390/5 | 112/05 | 02 | LUNA | CAC-5387 | - | - |

| S L | C-MISS NO | P F NO | ITEM | TYPE OF VEHICLE | REG NO | CHA. NO | ENG. NO |
|---|---|---|---|---|---|---|---|
| 10 | NCR NO 136/13 | 99/13 | 02 | YAMAHA GRUX | KA-11-M-6820 | 11G5KA031001 | SKA030081 |
| 11 | NCR NO 136/13 | 99/13 | 03 | BAJAJ CHETAK | CKY-9723 | - | - |
| 12 | NCR NO 137/13 | 100/13 | 01 | SUJUKI SAMURAI | CKL-4242 | 3606F070091 | 3606MO77086 |
| 13 | NCR NO 137/13 | 100/13 | 02 | TVS SUPER | KA-02-X-3389 | P1812F079844 | - |
| 14 | NCR NO 137/13 | 100/13 | 03 | YAMAHA RX | CRB-89 | D1L1151837 | - |
| 15 | NCR NO 140/13 | 101/13 | 01 | YAMAHA RX135 | KA-03-EC-625 | 00H1L7009712 | 1L099342 |
| 16 | NCR NO 140/13 | 101/13 | 01 | SUJUKI SAMURAI | KA-01-K-234 | 7501F480646 | 7501M52360 |
| 17 | NCR NO 140/13 | 101/13 | 03 | BAJAJ DISCAVER | KA-51-H-9109* | MD2U505ZZC86410 | DSGDNB39436 |
| 18 | NCR NO 148/13 | 103/13 | 01 | BAJAJ PULSAR | KA-05-ES-2079 | DHBHVBLB74100 | BHGBLB73504 |
| 19 | NCR NO 148/13 | 103/13 | 02 | SUJUKI SAMURAI | TSH-2621 | - | 2801M154903 |
| 20 | NCR NO 150/13 | 105/13 | 02 | SUJUKI SAMURAI | CKD-7498 | 360F035372 | 3500B001984 |
| 21 | NCR NO 150/13 | 105/13 | 03 | YAMAHA RX | CKD-2279 | - | 324591IL6 |
| 22 | NCR NO 174/13 | 112/13 | 01 | TVS 50 XL | KA-05-X-1837 | - | - |
| 23 | NCR NO 174/13 | 112/13 | 02 | TVS 50 XL | KA-05-EC-824 | - | - |
| 24 | NCR NO 174/13 | 112/13 | 03 | YAMAHA RX 130 | KA-01-J-2134 | 99C1L5227168 | IL5227168 |
| 25 | NCR NO 176/13 | 113/13 | 01 | BAJAJ CHETAK | KA-05-WF-470 | - | - |
| 26 | NCR NO 176/13 | 113/13 | 02 | BAJAJ CHETAK | CKO-1777 | - | - |
| 27 | NCR NO 176/13 | 113/13 | 03 | BAJAJ CHETAK | CAQ-5725 | -- | -- |
| 28 | NCR NO 179/12 | 114/13 | 01 | HERO HONDA CT-100 | KA-04-E-9267 | 95010E00821 | -- |
| 29 | NCR NO 179/13 | 144/13 | 02 | KINETIC HONDA | KA-02-U-6457 | -- | 748287NIE |
| 30 | NCR NO 179/13 | 144/13 | 03 | YAMAHA RX | KA-03-A-1446 | IL1180754 | IJ1180754 |
| 31 | NCR NO 192/13 | 121/13 | 01 | KINETIC HONDA | KA-05-WO-3545 | -- | -- |
| 32 | NCR NO 192/13 | 121/13 | 02 | KINETIC HONDA | BR-14-C-8031 | -- | -- |

| S L | C-MISS NO | P F NO | ITEM | TYPE OF VEHICLE | REG NO | CHA. NO | ENG. NO |
|---|---|---|---|---|---|---|---|
| 33 | NCR NO 192/13 | 121/13 | 03 | BAJAJ CHETAK | CAT-2409 | -- | -- |
| 34 | NCR NO 194/13 | 124/13 | 01 | TVS SCOTI | KA-05-L-5198 | -- | -- |
| 35 | NCR NO 194/13 | 124/13 | 02 | BAJAJ CHETAK | CKH-986 | -- | -- |
| 36 | NCR NO 194/13 | 124/13 | 03 | LML VESP | AP-31-C-2771 | -- | -- |
| 37 | NCR NO 232/13 | 136/12 | 01 | BAJAJ CHETAK | KA-01-K-35 | -- | -- |
| 38 | NCR NO 232/13 | 136/12 | 02 | BAJAJ CHETAK | KA-03-H-2088 | -- | -- |
| 39 | NCR NO 232/13 | 136/12 | 03 | SUJUKI SAMURAI | KA-05-U-1276 | 7608F677612 | 7608M722984 |
| 40 | NCR NO 245/13 | 137/13 | 02 | CANETIC HONDA | -- | NMFLJ551553 | -- |
| 41 | NCR NO 245/13 | 137/13 | 03 | BAJAJ CHETAK | KA-02-U-3773 | -- | -- |

**2nd Additional Chief Metropolitan Magistrate Bangalore City**

**PR.2460**

## IN THE COURT OF 5Th ADDITIONAL CHIEF METROPOLITAN MEGISTRATE, BENGALURU CITY

**Notification No. 99 /2013, Date 12-12-2013**

It is hereby notified for the information of the public that the unclaimed vehicles mentioned under are in the custody of the Kumarswamy layout Police, Bangalore City, as unclaimed shall be confiscated to the Government, and disposed of according to law of not claimed by the owner with proof of ownership within one month from the date of the publication of notification.

**Annexure-1**

| SL NO | VEHICLE NO | TYPE OF VEHICLE | ENGINE NO | CHASIS NO | LPT NUMBER | PF NUMBER |
|---|---|---|---|---|---|---|
| 1 | KA-02-E-8207 | TVS SPORTS | P1003M246732 | J1003F248316 | 69/13 | 198/2013 |
| 2 | KA-01-HE-8740 | DISCOVER | JZMBUL64688 | MD2DSJZZZ UWL20530 | 71/13 | 199/2013 |
| 3 | CKP-3546 | SUZUKI SAMORAI | 3606M073861 | 3606F067188 | 73/13 | 200/2013 |
| 4 | KA-01-E-4607 | KINETIC HONDA | 057078HESC | NIFSC061999 | 77/13 | 201/2013 |
| 5 | KA-04-V-2006 | YAMAHA | 1L5877040 | 98HIL5187740 | 81/13 | 203/2013 |
| 6 | KA-05-EL-1617 | YAMAHA ENTICER | 5US020948 | 0245USO20948 | 82/13 | 204/2013 |
| 7 | KA-03-EM-1340 | YAMAHA ENTICER | 5USO42757 | 03CUSO42757 | 87/13 | 207/2013 |
| 8 | WB-12-F-2577 | HERO HONDA SLANDER | 97J17E06942 | 97J19F07027 | 88/13 | 208/2013 |
| 9 | KA-22-E-6837 | YAMAHA | 1L1269847 | IL1269847 | 89/13 | 209/2013 |
| 10 | KA-02-V-5577 | SUZUKI SAMOURAI | 7711M959490 | 7711F912895 | 90/13 | 210/2013 |
| 11 | KA-05-U-6825 | KINETIC HONDA | 719118NTE-NC | NIFNC725725 | 92/13 | 212/2013 |
| 12 | AS-19-B-9336 | BAJAJ PULSAR | DJGBSC59023 | MD2DHDJZZSCC420465 | 94/13 | 214/2013 |
| 13 | CRU-164 | YAMAHA | ILI-096813 | IL1096813 | 109/13 | 227/2013 |
| 14 | KA-07-J-2459 | MAX -100 | 3606-M-072135 | --- | 110/13 | 228/2013 |
| 15 | KA-02-ER-9265 | BAJAJ PULSAR | DHGBMB31014 | DHVBMB32121 | 112/13 | 229/2013 |
| 16 | CH-03-K-0961 | BAJAJ PULSER | DJGBJE21102 | DJVBJE20243 | 113/13 | 230/2013 |

| SL NO | VEHICLE NO | TYPE OF VEHICLE | ENGINE NO | CHASIS NO | LPT NUMBER | PF NUMBER |
|---|---|---|---|---|---|---|
| 17 | KA-51-E-1976 | TVS HEVY DUTY | 0D1K51492508 | MD6218010952K2690 | 114/13 | 231/2013 |
| 18 | KL-5-G-2206 | SUZUKI SAMURAI | 784M065862 | 78045018667 | 115/13 | 232/2013 |
| 19 | NO VEHICLE NUMBER | YAMAHA -135 | 14700B400 | 00F1L7003400 | 117/13 | 234/2013 |
| 20 | KA-07-9156 | HERO HONDA SPLENDER | 02J18sM1550 | 02J20C16319 | 118/13 | 234/A/2013 |
| 21 | -20-J-1135 | BAJAJ PULSER | DHGBJK07871 | DHVBJK07873 | 126/13 | 237/2013 |
| 22 | KA-05-C-6043 | HERO HONDA SPLENDER | 06F15M38649 | 06F16C13421 | 127/13 | 238/2013 |
| 23 | KA-09-W-7070 | KENITIC HONDA | 083957N1E-5F | N1F5F088024 | 128/13 | 239/2013 |
| 24 | KA-25-S-6332 | YAMAHA | 4T4538060 | 02J4TL538060 | 130/13 | 241/2013 |
| 25 | TN -29-H-1253 | HERO HONDA SPLENDER | 04M15M4447 | 04M16L14715 | 131/13 | 242/2013 |
| 26 | KA-14-J-3720 | KENITIC HONDA | 698847NIENA | NIFNA705085 | 132/13 | 243/2013 |
| 27 | NO NUMBER RED COLOUR | HERO HONDA SPLENDER | B10E064909 | 96F19F06857 | 134/13 | 244/2013 |
| 28 | KA-54-J-6013 | HERO HONDA | 691522701 | 05L16F20834 | 136/13 | 245/2013 |
| 29 | KL-5C-5239 | SUZUKI SAMMARI | 85003M5351J9 | 8503F492314 | 140/13 | 246/2013 |
| 30 | CTT-6129 | HERO HONDA CD 100 | CL0E109004 | - | 141/13 | 247/2013 |
| 31 | KA-05-V-9779 | KENITIC HONDA | 734551NIE-PF | - | 145/13 | 248/2013 |
| 32 | AP-9-AD-1312 | SUZUKI SAMMARI | 7909M482780 | 7909F43270 | 146/13 | 249/2013 |
| 33 | CAO-6455 | TVS XL SUPER | - | A009F406622 | 151/13 | 250/2013 |
| 34 | CMM-5118 | BAJAJ CHETAK | 1606E984463 | - | 152/13 | 251/2013 |
| 35 | KA-09-J-3854 | K-BAJAJ | K31M93E03178 | 31F93E03497 | 156/13 | 252/2013 |
| 36 | KA-35-H-8295 | HERO PUCH CDI -65 | LB71930 | MD399H1BRXC724791 | 157/13 | 253/2013 |
| 37 | KA-30-E-2048 | YAMAHA RX-100 | 1L1233206 | 1L1236799 | 164/13 | 259/2013 |
| 38 | KA-51-Q-406 | TVS XL SUPER | 0D1N71255156 | MD621BD1472N89484 | 165/13 | 260/2013 |
| 39 | KA05-EN-3577 | HERO HONDA SPLANDER | 03F18-M15460 | 03F20-C12383 | 167/13 | 262/2013 |
| 40 | KA02-EF-6542 | BAJAJ PULSAR | DHGBJD32925 | DHVBJD32983 | 168/13 | 263/2013 |
| 41 | CRL-777 | MARUTHI VAN | - | - | 175/13 | 265/2013 |
| 42 | KA16-A4753 | LUGGAGE AUTO | - | - | 192/13 | 276/2013 |
| 43 | KA03-B-4360 | BAJAJ AUTO | AEMBKK94507 | 24FBKK62689 | 193/13 | 277/2013 |
| 44 | KA-05-EU-4315 | Bajaj CT-100 | DUMBLG60264 | DUFBLG73228 | 219/13 | 286/2013 |
| 45 | KA-05-HH-7460 | HONDA ACTIVA | JC44E-0034436 | ME43C-445D98035079 | 232/13 | 296/2013 |
| 46 | NO NUMBER PLATE | INDICA CAR | - | 600137CTZP43055 | 223/13 | 293/2013 |
| 47 | NO NUMBER PLATE | MARUTHI SHIFT | G13BBN254318 | MA3EYE41SOO138740M5 | 224/13 | 294/2013 |
| 48 | KL-46-5537 | HERO HONDA PASHION | 06M08M33289 | 06M09E18599 | 251/13 | 301/2013 |
| 49 | KA-06-L-5369 | TVS VICTOR | 93309M719350 | N3309F762881 | 256/2013 | 302/2013 |
| 50 | Bajaj Pulser | KA-20-S-5548 | DHGBKA60571 | DHVBKA8061 | C' Miss No 188/2009 | 39/2009 |
| 51 | Santro Car | DL-40-J-1787 | - | - | C' Miss No 302/2009 | 69/2009 |

**PR.2461**

**SC.5**

**5th ADDITIONAL CHIEF METROPOLITAN MEGISTRATE, BENGALURU CITY**

**PROCEEDINGS OF THE ASST. COMMISSIONER OF COMMERCIAL TAXES, LVO 030,**

**Present:- SUNDAR S. ACCT**

**Sub:-** Cancellation of 'C' Forms issued to M/s.Rajashree Trading Company, Bangalore – reg.

**Ref:-** (1) Letter No.Addl.CCT/Enf/SZ/DC-3/12-13 Dtd.14-06-2013 of Addl. Commr.Of Comml. Taxes, (Enf) South Zone, Bangalore.

(2) Letter No.Addl.CCT (I &C)DC/CR-469/2011-23 T.No.975 Dtd. 6-09-2013 of Addl. Commissioner of Commercial Taxes (I & C), Bangalore.

**Preamble:-**

M/s.Rajashree Trading Company, Bangalore (TIN NO.29800785563) is a registered dealer borne on the files of this office. The dealer Mr.Sampathraju (HUF) Proprietor of M/s.Rajashree Trading Company was investigated by the Commercial Tax Officer, (Enf.-8), South Zone, Bangalore , according to their investigation, it is realized that the dealer doesn't exists at the address furnished in VAT Form-1 at the time of registration. Dealer is only as Bill Traders who has issued 'C' Forms. The dealer Mr.Sampathraj (HUF) during the period 10-01-2008 to 31-12-2008 has cheated the Government by not paying the tax and ````registration was already de-registered w.e.f. 31-12-2008. In order to avoid the mis-use of 'C' Form No. 88249 to 88273 issued from this office are treated as invalid.

Hence, this order.

**ORDER NO.ACCT/LVO 030/ 357 /13-14 DATED 08-10-2013**

In view of the circumstances explained above, the following 'C' Forms issued to M/s.Rajashree Trading Company, Bangalore is treated as invalid with immediate effect.

| Sl. No. | Name of the Dealer | Registration No. | 'C' Form No. | 'C' Form No. & issued Date. |
|---|---|---|---|---|
| 1. | M/s.Rajashree Trading Company, Bangalore. | 29800785563 | KA-C/01 88001 to 89000 | KA-C/01 88249 to 88273 Dated 17-03-2008. |

**SUNDAR.S.**
Asst. Commissioner of Commercial Taxes,
LVO 030, Bangalore

**PR.2455**

## PROCEEDINGS OF THE ASST. COMMISSIONER OF COMMERCIAL TAXES, LVO 030,

**Present:- SUNDAR S. ACCT**

**Sub:-** Cancellation of 'C' Forms issued to M/s.B.M.Agency, Bangalore – reg.

**Ref:-** (1) Letter No.Addl.CCT/Enf/SZ/CTO-3/INS-2/2012-13 Dtd. 5-06-2013 of Addl. Commr.Of Comml. Taxes, (Enf-09)South Zone, Bangalore

(2) Letter No.Addl.CCT (I &C)DC/CR-469/2011-23 T.No.975 Dtd. 6-09-2013 of Addl. Commissioner of Commercial Taxes, ( I& C), Bangalore.

**Preamble:-**

M/s.B.M.Agency, Bangalore (TIN No.29110481120) is a registered dealer borne on the files of this office. The dealer Mr.Babulal.M., Proprietor of M/s.B.M.Agency, Bangalore was investigated by the CTO (Enf-3), South Zone, Bangalore, accordingly to their investigation it is realized that the dealer doesn't exists at the address furnished in VAT Form-1 at the time of registration. Dealer is only as Bill Traders who has issued 'C' Forms . The dealer Mr.Babulal.M., Proprietor during the period 01-04-2006 to 01-07-2009 has cheated the Government by not declaring the interstate purchases and registration was already de-registered w.e.f. 01-07-2009. In order to avoid the mis-use of 'C' Form No. 4975386 to 4975400 issued from this office are treated as invalid.

Hence, this order.

**ORDER NO.ACCT/LVO 030/ 358 /13-14 DATED 08-10-2013**

In view of the circumstances explained above, the following 'C' Forms issued to M/s.B.M.Agency, Bangalore is treated as invalid with immediate effect.

| Sl. No. | Name of the Dealer | Registration No. | 'C' Form No. | 'C' Form No. & issued Date. |
|---|---|---|---|---|
| 1. | M/s.B.M.Agency, Bangalore | 29110481120 | TCK-R 4974001 to 4977000 | TCK-R 4975386 to 4975400 Dated 24-01-2008 |

**SUNDAR.S.**
Asst. Commissioner of Commercial Taxes,
LVO 030, Bangalore

**PR.2456**

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE- CLARIFICATION UNDER SECTION 59(4) OF THE KARNATAKA VALUE ADDED TAX ACT, 2003.

**Sub:** KVAT Act, 2003 - Clarification under Section 59(4) regarding the rate of tax applicable on certain commodities-reg.

**Ref:** Application dated:08-11-2013 of M/s. Kalpavriksh, Bangalore. (TIN.29361163523)

In the application cited above of M/s. Kalpavriksh, No.15/3, SreeKrupa, 17th Cross, 6th Main, Malleshwaram-West, Bangalore-560055 has sought clarification regarding the rate of tax applicable on 'Welding flux'.

2. Section 59(4) of the Karnataka Value Added Tax Act , 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO.CLR.CR.110/13-14, DATED: 25-11-2013**

| Sl. No. | Product Name | Ingredients | Rate of tax |
|---|---|---|---|
| 1. | Oats Idly mix | Oats fortified with Dehydrated Methi | 14.5% from 01.08.2012 as unscheduled goods under section 4(1) (b)(iii) of the Karnataka Value Added Tax Act,2003. |
| 2. | Oats Upma mix | Oats with dehydrated vegetables- Carrot and Onion | |
| 3. | Multigrain Upma mix | Ragi, Oats, Bajra, Barley, Rice and Soji | |
| 4. | Multigrain Dosa mix | Ragi, Oats, Gram, Soya and Barley | |
| 5. | Multigrain Atta | Ragi, Oats, Gram, Soya and Maize | |
| 6. | Multigrain porridge | Ragi, Rice, Maize, Wheat, Green gram, Fried gram Oats, Sugar, Cardamom and Anti caking agents. | |
| 7. | Wheat Upma mix | Broken Wheat with spices | |
| 8. | Coriander wheat daliya mix | Wheat, Carrot, Onion and Spices blend. | |
| 9. | Hyderabadi Wheat daliya mix | Wheat, Carrot, Onion and Spices blend with flavor. | |
| 10. | Multi grain Dosa mix | Multi grain fortified with Calcium and Iron | |
| 11. | Multi grain Atta | Multi grain fortified with Iron, Vitamin A and Folic Acid. | |
| 12. | Multi grain porridge | Multi grain fortified with Vitamin and Minerals | |

**AJAY SETH**
Commissioner of Commercial Taxes,
(Karnataka), Bangalore

**PR.2454**
**SC.100**

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE- CLARIFICATION UNDER SECTION 59(4) OF THE KARNATAKA VALUE ADDED TAX ACT, 2003.

**Sub:** KVAT Act, 2003 - Clarification under Section 59(4) regarding the rate of tax applicable on 'Welding flux'-reg.

**Ref:** Application dated:06-08-2013 of M/s. Weldcraft Private Limited, Bangalore. (TIN.29930069486)

In the application cited above of M/s. Weldcraft Private Limited, No.72, Industrial Suburb, 1st Main, 2nd Stage, Tumkur Road, Yeshwanthpur, Bangalore-56022 has sought clarification regarding the rate of tax applicable on 'Welding flux'.

2. Section 59(4) of the Karnataka Value Added Tax Act , 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO.CLR.CR.64/13-14, DATED: 16-11-2013**

It is clarified that 'Welding flux' is liable to tax at 14.5% from 01.08.2012 as unscheduled goods under section 4(1) (b)(iii) of the Karnataka Value Added Tax Act,2003.

**AJAY SETH**
Commissioner of Commercial Taxes,
(Karnataka), Bangalore

**PR.2441**
**SC.100**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯ, ಸಾಗರ

**ಅಧಿಸೂಚನೆ ಸಂಖ್ಯೆ:ಬಿ3:ಅಮೊ.ವಾಹನ:ಪ್ರಕಟಣೆ:ವಿವ: 27/13-14, ದಿನಾಂಕ: 04-12-2013**

ಸಾಗರ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸಾಗರ ವಿಭಾಗದ ಇಲಾಖಾ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡ, ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಪ್ರಕಾರ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ವಿವರ ಕೆಳಕಂಡಂತಿರುತ್ತದೆ.

| ಕ್ರ.ಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| 1 | ಹೀರೊಹೊಂಡಾ ಬೈಕ್ ಕೆಎ-15-ಇ-2116 | ಸಾಗರ ವಲಯದ ಅ.ಮೊ. ಸಂಖ್ಯೆ : 33/13-14 ದಿ:30-08-2013 | Not visible | Not visible |
| 2 | ಮಾರುತಿ ವ್ಯಾನ್ ಕೆಎ-22-ಎಂ-1348 | ಅಂಬ್ಳಿಗೊಳ ವಲಯದ ಅ.ಮೊ. ಸಂಖ್ಯೆ 09/13-14 ದಿ:14-09-2013 | Not visible | WT91IN895166 |
| 3 | ಟಿಪ್ಪರ್ ಲಾರಿ ಕೆಎ-16-5799 | ಆನಂದಪುರಂ ವಲಯದ ಅ.ಮೊ. ಸಂಖ್ಯೆ 39/13-14 ದಿ:22-09-2013 | GSQ133998 | 7B094GS019830 |
| 4 | ಟಿವಿಎಸ್ ವಿಕ್ಟರ್ ಬೈಕ್ ಕೆಎ-19-ಯು-8911 | ಆನಂದಪುರಂ ವಲಯದ ಅ.ಮೊ. ಸಂಖ್ಯೆ:37/13-14 ದಿ: 19-09-2013 | OFIN51485436 | Not visible |
| 5 | ಟ್ರಾಕ್ಟರ್ ಕೆಎ-08-ಟಿ-1298 | ಅ.ಸಂ. ದಳ, ಶಿಕಾರಿಪುರದ ಅ.ಮೊ. ಸಂಖ್ಯೆ : 30/13-14 ದಿ:11-10-2013 | EVC3398 | EVC3398 |
| 6 | ಟ್ರಾಕ್ಟರ್ ಕೆಎ-14-ಟಿಎ-1546 | ಶಿರಾಳಕೊಪ್ಪ ವಲಯದ ಅ.ಮೊ. ಸಂಖ್ಯೆ:17/13-14 ದಿ: 11-10-2013 | NARW14192 | Not visible |
| 7 | ಟಿವಿಎಸ್ ಎಕ್ಸ್‌ಎಲ್ ಸೂಪರ್ ಕೆಎ-15-ಜೆ-1019 | ಸಾಗರ ವಲಯದ ಅ.ಮೊ. ಸಂಖ್ಯೆ:48/13-14 ದಿ: 13-10-2013 | Not visible | P3305FO776475 |
| 8 | ಹೀರೊಹೊಂಡಾ ಸ್ಪ್ಲೆಂಡರ್ ಬೈಕ್ ಕೆಎ-18-ಜೆ-3109 | ಅಂಬ್ಳಿಗೊಳ ವಲಯದ ಅ.ಮೊ. ಸಂಖ್ಯೆ: 17/13-14 ದಿ: 12-10-2013 | 98517M02746 | 01F20FH086 |
| 9 | ಬೊಲೆರೋ ಪಿಕ್ ಅಪ್ ಕೆಎ-46-1772 | ಆನಂದಪುರಂ ವಲಯದ ಅ.ಮೊ. ಸಂಖ್ಯೆ:49/13-14 ದಿ: 30-10-2013 | GG91B44123 | MAIZN0GGA 91B18791 |
| 10 | ಟಿವಿಎಸ್ ಬೈಕ್ ಕೆಎ-30-ಎಫ್-5118 | ಆನಂದಪುರಂ ವಲಯದ ಅ.ಮೊ. ಸಂಖ್ಯೆ:24/13-14 ದಿ: 12-08-2013 | DF4G4541009800 | MD625DE41G10077 |

| ಕ್ರ.ಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 11 | ಮಾರುತಿ ವ್ಯಾನ್<br>ಕೆಎ–20–1909 | ಸಾಗರ ವಲಯದ<br>ಅ.ಮೊ. ಸಂಖ್ಯೆ:54/13–14<br>ದಿ: 26–10–2013. | Not visible | IN-922826 |
| 12 | ಮಾರುತಿ ವ್ಯಾನ್<br>ಕೆಎ–27–ಎಮ್–2567 | ಅಂಬ್ಲಿಗೊಳ ವಲಯದ<br>ಅ.ಮೊ. ಸಂಖ್ಯೆ: 24/13–14<br>ದಿ: 10–11–2013. | Not visible | XMA3EVB11S00887745XK7 |
| 13 | ಮಾರುತಿ ವ್ಯಾನ್<br>ಜಿಎ–01–ಸಿ–6112 | ಶಿಕಾರಿಪುರ ವಲಯದ<br>ಅ.ಮೊ. ಸಂಖ್ಯೆ: 34/13–14<br>ದಿ: 20–10–2013 | Not visible | ST-91-IN-202715 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರು ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನಗಳ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾದ್ಯತೆಗಳನ್ನು ಕೆಳಸಹಿದಾರರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಲು ಸೂಚಿಸಿದೆ. ಈ ಮೇಲಿನ ವಾಹನಗಳನ್ನು ಶ್ರೀಗಂಧ ಮತ್ತು ಇತರೇ ಅರಣ್ಯ ಉತ್ಪನ್ನವನ್ನು ಕಳ್ಳಸಾಗಣೆ ಮಾಡಲು ಉಪಯೋಗಿಸಿದಕ್ಕಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೇಕೆ? ಎಂಬುದರ ಬಗ್ಗೆ ಲಿಖಿತ ಸಮಜಾಯಿಷಿಯನ್ನು ಇತರೆ ಮೂಲ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ತಿಳಿಸಲಾಗಿದೆ. ಈ ಮೇಲ್ಕಂಡ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ)ರ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

PR.2450
SC.25

## ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆ

**ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯನಿರ್ದೇಶಕರು ಹಾಗೂ ಅಧ್ಯಕ್ಷರು, ಬಾಯ್ಲರ್ ಆಪರೇಷನ್ ಇಂಜಿನಿಯರ್ಸ್ ಪರೀಕ್ಷಾ ಮಂಡಳಿಯವರ ಕಛೇರಿ, ಕಾರ್ಮಿಕ ಭವನ, 2ನೇ ಮಹಡಿ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29,**

**ಸಂಖ್ಯೆ:ಬಿಎಲ್‌ಆರ್–4/ಬಿಓಇ/ಸಿಆರ್–22/13–14, ದಿನಾಂಕ: 28–10–2013**

ಬಾಯ್ಲರ್ ಆಪರೇಷನ್ ಇಂಜಿನಿಯರ್ಸ್ ಪರೀಕ್ಷೆಯ ಅಧಿಸೂಚನೆ ಬಗ್ಗೆ.

ಮುಂದಿನ, ಕರ್ನಾಟಕ ಬಾಯ್ಲರ್ ಆಪರೇಷನ್ ಇಂಜಿನಿಯರ್ಸ್ ಪರೀಕ್ಷೆಯನ್ನು ನಡೆಸಲು ಬಾಯ್ಲರ್ ಆಪರೇಷನ್ ಇಂಜಿನಿಯರ್ಸ್ ಮಂಡಳಿಯು ಉದ್ದೇಶಿಸಿರುತ್ತದೆ. ಸದರಿ ಪರೀಕ್ಷೆಗೆ ವಿವಿಧ ಜಿಲ್ಲೆಗಳಿಂದ ಬರುವ ಅರ್ಜಿಗಳ ಸಂಖ್ಯೆಯ ಮೇಲೆ ಪರೀಕ್ಷಾ ಸ್ಥಳವನ್ನು ಮತ್ತು ದಿನಾಂಕವನ್ನು ನಿಗಧಿಪಡಿಸಿ ಅಭ್ಯರ್ಥಿಗಳಿಗೆ ತಿಳಿಸಲಾಗುವುದು.

ಆಸಕ್ತ ಅಭ್ಯರ್ಥಿಗಳು ಪರೀಕ್ಷೆಯ ಅರ್ಜಿ ನಮೂನೆಗಳಿಗಾಗಿ ಹತ್ತು ರೂಪಾಯಿಗಳ ಅಂಚೆ ಚೀಟಿ ಹಚ್ಚಿದ ಸ್ವ ವಿಳಾಸವುಳ್ಳ ಲಕೋಟೆಯೊಂದಿಗೆ ಕಾರ್ಯದರ್ಶಿ, ಬಾಯ್ಲರ್ ಆಪರೇಷನ್ ಇಂಜಿನಿಯರ್ಸ್ ಪರೀಕ್ಷಾ ಮಂಡಳಿ, ಕಾರ್ಮಿಕ ಭವನ, 2ನೇ ಮಹಡಿ, ಬೆಂಗಳೂರು ಡೈರಿ ಸರ್ಕಲ್ ಹತ್ತಿರ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29, ಇವರಿಗೆ ಮನವಿ ಸಲ್ಲಿಸಿ ಪಡೆದುಕೊಳ್ಳಬಹುದು. ಪರೀಕ್ಷೆಯ ಅರ್ಜಿ ನಮೂನೆಗಳನ್ನು ಜಾಲತಾಣ www.karnataka.gov.in/surakshate ಅಥವಾ www.labour.kar.nic.in ಗಳಿಂದ ಡೌನ್‌ಲೋಡ್ ಮಾಡಿಕೊಳ್ಳಬಹುದಾಗಿದೆ. ಅಲ್ಲದೆ ಇಲಾಖೆಯ ಮೈಸೂರು, ಮಂಗಳೂರು, ದಾವಣಗೆರೆ, ಶಿವಮೊಗ್ಗ, ಹುಬ್ಬಳ್ಳಿ, ಬೆಳಗಾವಿ, ಹಾಗೂ ಗುಲ್ಬರ್ಗಾ ವಿಭಾಗೀಯ ಕಛೇರಿಗಳಿಂದ ಖುದ್ದಾಗಿ ಸಹ ಪಡೆದುಕೊಳ್ಳಬಹುದಾಗಿದೆ. ಪರೀಕ್ಷೆಗೆ ನಿಗದಿಪಡಿಸಿರುವ ವಯೋಮಿತಿ, ವಿದ್ಯಾರ್ಹತೆ ಮತ್ತು ಅನುಭವ ಈ ಕೆಳಕಂಡಂತೆ ಇರುತ್ತದೆ.

1. ವಯಸ್ಸು: ಅಭ್ಯರ್ಥಿಯ ಮಯಸ್ಸು 23 ವರ್ಷಕ್ಕಿಂತ ಕಡಿಮೆ ಇರಬಾರದು.
2. ವಿದ್ಯಾರ್ಹತೆ: ಮಾನ್ಯತೆ ಪಡೆದ ವಿದ್ಯಾಸಂಸ್ಥೆಯಿಂದ ಮೆಕ್ಯಾನಿಕಲ್ ಅಥವಾ ಎಲೆಕ್ಟ್ರಿಕಲ್ ಅಥವಾ ಕೆಮಿಕಲ್ ಅಥವಾ ಪವರ್ ಪ್ಲಾಂಟ್ ಅಥವಾ ಪ್ರೊಡಕ್ಷನ್ ಅಥವಾ ಇನ್ಸಟ್ರುಮೆಂಟೇಷನ್ ಇಂಜಿನಿಯರಿಂಗ್‌ನಲ್ಲಿ ಪದವಿ ಅಥವಾ ಡಿಪ್ಲೋಮಾ ವಿದ್ಯಾರ್ಹತೆಯನ್ನು ಯಶಸ್ವಿಯಾಗಿ ಪೂರ್ಣಗೊಳಿಸಿರಬೇಕು.
3. ಅನುಭವ: ಪದವೀಧರರಿಗೆ ಎರಡು ವರ್ಷ ಹಾಗೂ ಡಿಪ್ಲೋಮಾ ವಿದ್ಯಾರ್ಹತೆ ಹೊಂದಿರುವವರಿಗೆ ಐದು ವರ್ಷ (**) ಬಾಯ್ಲರ್ ಆಪರೇಷನ್ ಮತ್ತು ಅಥವಾ ಮೆಂಟೆನನ್ಸ್‌ನಲ್ಲಿ ಈ ಕೆಳಕಂಡ ಕನಿಷ್ಠ ಹೀಟಿಂಗ್ ಸರ್ಫೇಸ್ ಇರುವ ಬಾಯ್ಲರ್ ಮೇಲೆ ಸೇವೆ ಸಲ್ಲಿಸಿದ ಅನುಭವ ಹೊಂದಿರುಬೇಕು.

1000 ಚದರ ಮೀಟರ್‌ಗಳಿಗಿಂತ ಕಡಿಮೆ ಹೀಟಿಂಗ್ ಸರ್ಫೇಸ್ ಇರದ ಒಂದು ಬಾಯ್ಲರ್

ಅಥವಾ

